## ANNEXURE - 17

## STENOGRAPHERS IDENTIFIED AS SURPLUS AND WHO ARE WORKING ON DEPUTATION

| SL. NO. | SENIO-RITY NO. | NAME | TYPE | DESIGNATION | OFFICE NAME | PLACE | DISTRICT | DATE OF WORKING IN THAT PLACE | DOB | DEPT / DEPUTATION/ REDEPLOYED | SC/ ST | NATIVE/ DIST. | STATUS |
|---|---|---|---|---|---|---|---|---|---|---|---|---|---|
| 1 | 36 | B.M.YESHODHA | OFFICIATING | STENOGRAPHER | HANDLOOMS | BANGALORE | BANGALORE | Apr-93 | 5/2/64 | REDEPLOYED | - | BANGALORE | SURPLUS-1 |
| 2 | 41 | V.SARASWATHI | OFFICIATING | STENOGRAPHER | HANDLOOMS | BANGALORE | BANGALORE | Apr-93 | 5/7/56 | REDEPLOYED | - | BANGALORE | SURPLUS-6 |
| 3 | 47 | S.HEMALATHA | OFFICIATING | STENOGRAPHER | HANDLOOMS | BANGALORE | BANGALORE | Apr-93 | 22/12/62 | REDEPLOYED | - | BANGALORE | SURPLUS-11 |

## ANNXURE-18

## LIST OF SDAs DECLARED AS SURPLUS WORKING ON DEPUTATION

| SL NO | SENIO-RITY | NAME | TYPE OFFICIATING/ RULE 32 | DESIG-NATION | OFFICE NAME | PLACE | DISTRICT | DATE OF WORKING IN THAT PLACE | DOB | DEPT/ DEPN | SC/ ST | NATIVE | STATUS |
|---|---|---|---|---|---|---|---|---|---|---|---|---|---|
| 1 | 52 | H.DHANRAJ | OFFICIATING | SDA | H&T(HO) | BANGALORE | BANGALORE | Jun-98 | 29-Aug-52 | DEPN | SC | HASSAN | SURPLUS |
| 2 | 70 | C.R.SHIVANANJAIAH | OFFICIATING | SDA | H&T(HO) | BANGALORE | BANGALORE | Jun-00 | 10-Apr-54 | DEPN | SC | MYSORE | SURPLUS |
| 3 | 75 | B.A.PHEER JAAD | OFFICIATING | SDA | H&T | DHARWAD | DHARWAD | Jul-97 | 2-Feb-66 | DEPN | - | DHARWAD | SURPLUS |
| 4 | 78 | KUSUMA.G. MAGAIAHNAVAR | OFFICIATING | SDA | H&T | BELGAUM | BELGAUM | May-94 | 25-Apr-53 | DEPN | - | BELGAUM | SURPLUS |
| 5 | 81 | SUSHEELA DEVI | OFFICIATING | SDA | H&T | TUMKUR | TUMKUR | Mar-94 | 1-Jun-63 | DEPN | - | TUMKUR | SURPLUS |
| 6 | 103 | M.CHELVARAJU | OFFICIATING | SDA | H&T(HO) | BANGALORE | BANGALORE | Jun-95 | 3-Jun-53 | DEPN | SC | BANGALORE | SURPLUS |
| 7 | 111 | S.BASAVARAJU | OFFICIATING | SDA | H&T | SHIMOGA | SHIMOGA | Jun-97 | 25-Jul-65 | DEPN | SC | SHIMOGA | SURPLUS |
| 8 | 121 | K.SURESH | OFFICIATING | SDA | H&T | MYSORE | MYSORE | Jun-97 | 25-Aug-54 | DEPN | - | MYSORE | SURPLUS |
| 9 | 122 | SHASHIDAR | OFFICIATING | SDA | H&T | HASSAN | HASSAN | Jun-97 | 4-Feb-75 | DEPN | - | MANDYA | SURPLUS |
| 10 | 131 | M.LAKSHMINARAYANA | OFFICIATING | SDA | H&T | BANGALORE | BANGALORE | Jul-95 | 21-Nov-51 | DEPN | SC | BANGALORE | SURPLUS |
| 11 | 136 | TUKARAM | OFFICIATING | SDA | H&T | BIDAR | BIDAR | Nov-97 | 1-Jan-55 | DEPN | SC | BIDAR | SURPLUS |
| 12 | 152 | MALAPPA SAIBANNA | OFFICIATING | SDA | H&T | GULBARGA | GULBARGA | Mar-98 | 5-Apr-48 | DEPN | - | GULBARGA | SURPLUS |

## ANNEXURE-19

## LIST OF GROUP D EMPLOYEES DECLARED AS SURPLUS WORKING ON DEPUTATION

| SL NO | SENIO-RITY | NAME | TYPE OFFICIAT-ING/ RULE 32 | DESIGNA-TION | OFFICE NAME | PLACE | DISTRICT | DATE OF WORKING IN THAT PLACE | DOB | DEPT/ DEPN | SC/ST | NATIVE | STATUS |
|---|---|---|---|---|---|---|---|---|---|---|---|---|---|
| 1 | 52 | K.N.DAYANANDA | OFFICIATING | GROUP'D' | N.P.KENDRA | BANGALORE | B'LORE | May-97 | | DEPN | | | SURPLUS |
| 2 | 68 | K.S.BIRNOLI | OFFICIATING | GROUP'D' | ZP | BELGAUM | BELGAUM | | 15-Jun-1954 | DEPN | | | SURPLUS |
| 3 | 69 | M.S.PATIL | OFFICIATING | GROUP'D' | ZP | BELGAUM | BELGAUM | | 3-Mar-1956 | DEPN | | | SURPLUS |
| 4 | 80 | SANNAGALAPPA | OFFICIATING | GROUP'D' | ZP | BELLARY | BELLARY | | 14-Aug-1948 | DEPN | ST | | SURPLUS |
| 5 | 81 | C.V.PRAHALAD | OFFICIATING | GROUP'D' | ZP | BELLARY | BELLARY | | 1-Jun-1960 | DEPN | | | SURPLUS |
| 6 | 137 | ALLAH BAKSH | OFFICIATING | GROUP"D" | ZP | GULBARGA | GULBARGA | | | DEPN | | | SURPLUS |
| 7 | 138 | SHIVSHANKAR | OFFICIATING | GROUP"D" | ZP | GULBARGA | GULBARGA | | | DEPN | SC | | SURPLUS |
| 8 | 150 | B.N.RUDREGOWDA | OFFICIATING | GROUP"D" | ZP | HASSAN | HASSAN | | 22-Nov-1950 | DEPN | | | SURPLUS |

**ASHOK DALWAI**
Secretary to Government,
Commerce and Industries Department.

PR-480

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ಸಚಿವಾಲಯ

**ವಿಷಯ :** ಕರ್ನಾಟಕ ಭೂಸೇನಾ ನಿಗಮದಲ್ಲಿ ಅನಗತ್ಯವೆಂದು ಕಂಡು ಬಂದಿರುವ ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ವ್ಯವಸ್ಥಾಪಕ ನಿರ್ದೇಶಕರು, ಕಭೂಸೇನಿ, ಬೆಂಗಳೂರು ಇವರ ಪತ್ರ ಸಂ.ಕೆಎಲ್ಎಸಿ.ಇಎಸ್ಟಿ.ಸಿಆರ್–34:03–04 ದಿನಾಂಕ.5.5.03, 21.5.03, 9.7.03, 28.7.03, 29.9.03, 17.12.03, 3.1.04, 9.2.04, ಮತ್ತು 5.4.04.

2. ಕರ್ನಾಟಕ ಭೂಸೇನಾ ನಿಗಮದ ನಿರ್ದೇಶಕರುಗಳ ಮಂಡಳಿಯ 136ನೇ ಸಭೆ ನಡವಳಿ ದಿನಾಂಕ.25.4.03, ಹಾಗೂ 139ನೇ ಸಭೆ ನಡವಳಿ ದಿನಾಂಕ.4.2.04.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಭೂಸೇನಾ ನಿಗಮ, ಬೆಂಗಳೂರು ಇವರು ಉಲ್ಲೇಖ (1)ರಂತೆ ದಿನಾಂಕ.5.5.03ರ ಪ್ರಸ್ತಾವನೆಯಲ್ಲಿ 'ನಿಗಮದ ನಿರ್ದೇಶಕರುಗಳ ಮಂಡಳಿಯ 136ನೇ ಸಭೆ ನಡವಳಿ ಅನ್ವಯ ಈ ಹಿಂದೆ 1996ರ ನಿಗಮದ ವೃಂದ ಮತ್ತು ನೇಮಕಾತಿ ನಿಯಮಗಳ ಅನುಸಾರ ಸೃಜಿಸಲಾಗಿದ್ದ 1607 ಹುದ್ದೆಗಳ ಪೈಕಿ ಹಾಲಿ ಅನಗತ್ಯವೆಂದು ಕಂಡುಬಂದಿರುವ 245 ಹುದ್ದೆಗಳನ್ನು ರದ್ದುಪಡಿಸಲು ಹಾಗೂ ಅಗತ್ಯವಿರುವ ವೃಂದಗಳಲ್ಲಿ 147 ಹುದ್ದೆಗಳನ್ನು ಸೃಜಿಸಲು' ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ನಿಗಮದ ಮೇಲ್ಕಂಡ ಪ್ರಸ್ತಾವನೆಯನ್ನು ಸಹಮತಿಗಾಗಿ ಆರ್ಥಿಕ ಇಲಾಖೆಗೆ ಕಳುಹಿಸಿಕೊಡಲಾಗಿ, ಆರ್ಥಿಕ ಇಲಾಖೆಯು ತನ್ನ ಸಹಮತಿ ಸಂ.ಎಫ್‌ಡಿ.1736.ಇಎಕ್ಸ್‌ಪಿ.6/2003 ದಿನಾಂಕ.8.9.2003ರಲ್ಲಿ 'ಕರ್ನಾಟಕ ಭೂಸೇನಾ ನಿಗಮದಲ್ಲಿ 1.4.2000ರಲ್ಲಿ ಖಾಲಿ ಇದ್ದ 560 ಹುದ್ದೆಗಳ ಪೈಕಿ ಶೇ.80ರಷ್ಟು ಹುದ್ದೆಗಳನ್ನು ರದ್ದುಪಡಿಸುವಂತೆ ಹಾಗೂ ಸಹಮತಿ ಸಂ.ಎಫ್.ಡಿ.406.ಇಎಕ್ಸ್‌ಪಿ.6/2004 ದಿನಾಂಕ.3.3.04 ರಲ್ಲಿ ಸದರಿ ಹುದ್ದೆಗಳ ರದ್ದತಿ ಆದೇಶವನ್ನು ಹಾಜರ್ಪಡಿಸುವಂತೆ' ಸೂಚಿಸಿರುತ್ತೆ.

ಆನಂತರ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಉಲ್ಲೇಖ (1)ರಂತೆ ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ.5.4.2004ರ ಪ್ರಸ್ತಾವನೆಯಲ್ಲಿ 'ನಿಗಮದ ನಿರ್ದೇಶಕರುಗಳ ಮಂಡಳಿಯ 139ನೇ ಸಭೆಯಲ್ಲಿ ಕೈಗೊಂಡ ನಿರ್ಣಯದಂತೆ ಆರ್ಥಿಕ ಇಲಾಖೆಯ ಮೇಲ್ಕಂಡ ಸಹಮತಿ ಅನ್ವಯ ನಿಗಮದಲ್ಲಿ ದಿನಾಂಕ.1.4.2000ರಲ್ಲಿ ವಿವಿಧ ವೃಂದಗಳಲ್ಲಿ ಖಾಲಿ ಇದ್ದ 560 ಹುದ್ದೆಗಳ ಪೈಕಿ ರದ್ದುಪಡಿಸಬೇಕಾದ ಶೇ.80ರಷ್ಟು ಅಂದರೆ 448 ಖಾಲಿ ಹುದ್ದೆಗಳ ಸಂಖ್ಯಾ ವಿವರವನ್ನು ನೀಡಿರುತ್ತಾರೆ.

ನಿಗಮದ ಈ ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ, ನಿಗಮದ ಪ್ರಸ್ತುತ ವಹಿವಾಟಿನಲ್ಲಿ ಅನಗತ್ಯವೆಂದು ಕಂಡುಬಂದಿರುವ ವಿವಿಧ ವೃಂದಗಳಲ್ಲಿನ 448 ಖಾಲಿ ಹುದ್ದೆಗಳನ್ನು ರದ್ದುಪಡಿಸಲು ಸರ್ಕಾರವು ನಿಶ್ಚಯಿಸಿರುತ್ತೆ. ಅದಕ್ಕಾಗಿ ಈ ಆದೇಶ.

### ಸರ್ಕಾರಿ ಆದೇಶ ಸಂ.ಗ್ರಾಅಪ.ಪ್ರಅಕಾ.17.ಕಭೂನಿ.2003 ದಿನಾಂಕ 5ನೇ ಮೇ 2004

ಕರ್ನಾಟಕ ಭೂಸೇನಾ ನಿಗಮದಲ್ಲಿ ದಿನಾಂಕ.1.4.2000ರಲ್ಲಿ ಖಾಲಿ ಇದ್ದ 560 ಹುದ್ದೆಗಳ ಪೈಕಿ **ಅನುಬಂಧ–1ರಂತೆ** ವಿವಿಧ ವೃಂದಗಳಲ್ಲಿ ಹಾಲಿ ಅನಗತ್ಯವೆಂದು ಕಂಡುಬಂದಿರುವ 448 ಹುದ್ದೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

2. ಸದರಿ 448 ಹುದ್ದೆಗಳ ರದ್ದತಿಗೆ ತಗಲುವ ವೆಚ್ಚವನ್ನು ನಿಗಮವೇ ತನ್ನ ಆರ್ಥಿಕ ಸಂಪನ್ಮೂಲಗಳಿಂದ ಭರಿಸತಕ್ಕದ್ದು.

೩. ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂ.ಎಫ್‌ಡಿ.1736.ಇಎಕ್ಸ್‌ಪಿ–6:2003 ದಿನಾಂಕ.8.9.2003 ಹಾಗೂ ಸಂ.ಎಫ್‌ಡಿ.406.ಇಎಕ್ಸ್‌ಪಿ–6:2004 ದಿನಾಂಕ.3.3.04ರಲ್ಲಿ ನೀಡಿರುವ ಸೂಚನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಬಿ. ಹಿರೇಮಣಿಯವರ್**

ನಿರ್ದೇಶಕರು, ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ.

### ಸರ್ಕಾರದ ಆದೇಶ ಸಂ.ಗ್ರಾಅಪ.ಪ್ರಅಕಾ.17.ಕಭೂನಿ.2003 ದಿನಾಂಕ.05.05.2004 –ಕ್ಕೆ

### ಅನುಬಂಧ–1

ಕರ್ನಾಟಕ ಭೂಸೇನಾ ನಿಗಮದಲ್ಲಿ 1996ರ ವೃಂದ ಮತ್ತು ನೇಮಕಾತಿ ನಿಯಮಗಳು ಅನುಸಾರ ಹಾಗೂ ತದನಂತರ ಸರ್ಕಾರೀ ಆದೇಶಗಳನ್ವಯ ಸೃಜಿಸಲಾಗಿದ್ದ ಹುದ್ದೆಗಳ ಪೈಕಿ ಹಾಲಿ ರದ್ದುಪಡಿಸಲಾಗಿರುವ ಹುದ್ದೆಗಳ ವೃಂದವಾರು ವಿವರ ಈ ಕೆಳಕಂಡಂತಿವೆ.

| ಕ್ರ.ಸಂ. | ವೃಂದದ ಹೆಸರು | ರದ್ದುಪಡಿಸಲಾಗಿರುವ ಹುದ್ದೆಗಳ ಸಂಖ್ಯೆ. |
|---|---|---|
| 01. | ವಿಶೇಷಾಧಿಕಾರಿ | 01 |
| 02. | ಕಾರ್ಯದಳಪತಿ ಗ್ರೇಡ್–1 | 64 |
| 03. | ಕಾರ್ಯದಳಪತಿ (ವಾಸ್ತುಶಿಲ್ಪಿ) | 03 |
| 04. | ಕಾರ್ಯದಳಪತಿ (ಎಲೆಕ್ಟ್ರಿಕಲ್) | 02 |
| 05. | ಕಂಪ್ಯೂಟರ್ ಪ್ರೋಗ್ರಾಮರ್ | 02 |
| 06. | ಕಂಪ್ಯೂಟರ್ ಪ್ರೋಗ್ರಾಮರ್ ಅಸಿಸ್ಟೆಂಟ್ | 01 |
| 07. | ಸಹಾಯಕ ಕಾರ್ಯದಳಪತಿ | 61 |
| 08. | ವಾಹನ ಯಂತ್ರಕರ್ಮಿ | 01 |
| 09. | ಆಕೃತಿ ರಚನಾಕಾರ (ಡ್ರಾಫ್ಟ್‌ಮೆನ್) | 07 |
| 10. | ಶೀಘ್ರಲಿಪಿಗಾರ | 15 |
| 11. | ಪ್ರಥಮ ದರ್ಜೆ ಸಹಾಯಕ | 20 |
| 12. | ಹಿರಿಯ ವಾಹನಚಾಲಕ | 04 |

| ಕ್ರ.ಸಂ. | ವೃಂದದ ಹೆಸರು | ರದ್ದುಪಡಿಸಲಾಗಿರುವ ಹುದ್ದೆಗಳ ಸಂಖ್ಯೆ. |
|---|---|---|
| 13. | ಹಿರಿಯ ಕಾರ್ಯನಿರೀಕ್ಷಕ | 25 |
| 14. | ಅನುರೇಖಕ (ಟ್ರೇಸರ್) | 10 |
| 15. | ದ್ವಿತೀಯ ದರ್ಜೆ ಸಹಾಯಕ | 40 |
| 16. | ಬೆರಳಚ್ಚುಗಾರ | 44 |
| 17. | ಉಗ್ರಾಣಪಾಲಕ–ಗ್ರೇಡ್–2 | 09 |
| 18. | ವಾಹನಚಾಲಕ | 12 |
| 19. | ಮೇಸ್ತ್ರಿ | 12 |
| 20. | ಅಟೆಂಡರ್ | 01 |
| 21. | ಜವಾನ (ಪಿಯೊನ್) | 25 |
| 22. | ಕಾವಲುಗಾರ (ವಾಚ್‌ಮೆನ್) | 79 |
| 23. | ಕಸಗುಡಿಸುವವ (ಸ್ವೀಪರ್) | 10 |
| | ಒಟ್ಟು | **448** |

**ಜಿ.ಬಿ.ಹಿರೇಮಣಿಯವರ್**
ನಿರ್ದೇಶಕರು, ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ.

ಪಿ.ಆರ್.೪೯೫

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ವೈದ್ಯಕೀಯ ಶಿಕ್ಷಣ ಇಲಾಖೆಯ ಸೇವಾನಿರತ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವುದರಿಂದ ಉಂಟಾಗುವ ಬೋಧನಾ ಶುಲ್ಕದ ಪಾವತಿ ಮಾಡುವುದು.

**ಓದಲಾಗಿದೆ :** 1. ದಿನಾಂಕ:15.04.2004, ಸಂಖ್ಯೆ.ಆಕುಕ 05 ಸಿಓಎಂ 2004–2005ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ಪತ್ರ.
2. ದಿನಾಂಕ:16.04.2004, ಸಂಖ್ಯೆ.ಆಕುಕ 10 ಎಂಪಿಎಸ್ 2004ರ ಅಧಿಸೂಚನೆ.

**ಪೀಠಿಕೆ:**

1) ವೈದ್ಯಕೀಯ ಶಿಕ್ಷಣ ಇಲಾಖೆಯ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ವೈದ್ಯಕೀಯ ಮತ್ತು ದಂತ ಪದವಿ ಕೋರ್ಸುಗಳಿಗೆ ನಿಯೋಜಿಸಲು 2003ರ ಕರ್ನಾಟಕ ಸ್ನಾತಕೋತ್ತರ ವೈದ್ಯಕೀಯ ಮತ್ತು ದಂತ ಪದವಿ ಮತ್ತು ಡಿಪ್ಲೋಮಾ ಕೋರ್ಸುಗಳ ಪ್ರವೇಶಾವಕಾಶಕ್ಕಾಗಿ ಪ್ರವೇಶ ಪರೀಕ್ಷೆ ನಡೆಸುವಿಕೆ ನಿಯಮಾವಳಿಯ 12ನೇ ನಿಯಮದೊಂದಿಗೆ ಓದಲಾದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 61ನೇ ನಿಯಮ ಹಾಗೂ II-A-Iನೇ ಅಪೆಂಡಿಕ್ಸ್‌ನ ಪ್ರಕಾರ ಅವಕಾಶ ಕಲ್ಪಿಸಲಾಗಿದೆ. 2003–04ನೇ ಶೈಕ್ಷಣಿಕ ವರ್ಷದವರೆಗೆ ಸರ್ಕಾರಿ ವೈದ್ಯಕೀಯ ಕಾಲೇಜುಗಳಲ್ಲಿ ಹಾಗೂ ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ಸರ್ಕಾರಿ ಕೋಟಾದಡಿ ಸರ್ಕಾರಿ ಸೀಟುಗಳ ಅಭ್ಯರ್ಥಿಗಳು ಕೇವಲ 5,000–00 ರೂ.ಗಳ ಕ್ಲಿನಿಕಲ್ ಕೋರ್ಸಿನ ಶುಲ್ಕವನ್ನು, 1,000–00 ರೂ.ಗಳ ಶುಲ್ಕವನ್ನು ಅರೆ ಕ್ಲಿನಿಕಲ್ ಕೋರ್ಸುಗಳಿಗೆ ಮತ್ತು ಪ್ರೀ ಕ್ಲಿನಿಕಲ್ ಕೋರ್ಸುಗಳಿಗೆ ಹಾಗೂ 5,000–00 ರೂ.ಗಳ ಬೋಧನಾ ಶುಲ್ಕವನ್ನು ದಂತ ಕೋರ್ಸುಗಳಿಗೆ ನಿಗದಿಪಡಿಸಲಾಗಿತ್ತು. ಅದನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ II-A-Iನೇ ಅಪೆಂಡಿಕ್ಸ್‌ನ 8(d)ನೇ ನಿಯಮದಡಿ ಮರುಪಾವತಿ ಮಾಡಲಾಗುತ್ತಿತ್ತು. ದಿನಾಂಕ:14/08/2003ರ ಸರ್ವೋಚ್ಛ ನ್ಯಾಯಾಲಯದ ಇಸ್ಲಾಮಿಕ್ ಅಕಾಡೆಮಿ ಆಫ್ ಎಜುಕೇಷನ್ ಪ್ರಕರಣದಲ್ಲಿ ನೀಡಲಾದ ತೀರ್ಪಿನನುಸಾರ ವೃತ್ತಿಪರ ಕಾಲೇಜುಗಳ ಶುಲ್ಕವಿನ್ಯಾಸ ನಿಗದೀಕರಣಕ್ಕಾಗಿ ನ್ಯಾಯಮೂರ್ತಿ ಎ.ಬಿ ಮುರುಗೋಡ್ ಸಮಿತಿಯನ್ನು ಸ್ಥಾಪಿಸಲಾಗಿದೆ. 2004–05ನೇ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಏಕಸ್ವಾಮ್ಯವಾಗಿ ಸ್ನಾತಕೋತ್ತರ ವೈದ್ಯಕೀಯ ಮತ್ತು ದಂತ ಪದವಿ/ಡಿಪ್ಲೋಮೋ ಕೋರ್ಸುಗಳ ಬೋಧನಾ ಶುಲ್ಕವನ್ನು ಹಂಗಾಮಿಯಾಗಿ ಈ ಕೆಳಕಂಡಂತೆ ಖಾಸಗಿ ವೈದ್ಯಕೀಯ ಮತ್ತು ದಂತ ಕಾಲೇಜುಗಳ ಸರ್ಕಾರಿ ಸೀಟುಗಳಿಗೆ ಮತ್ತು ಆಡಳಿತ ಮಂಡಳಿ ಸೀಟುಗಳಿಗೆ ಅನ್ವಯವಾಗುವಂತೆ ವಾರ್ಷಿಕ ಶುಲ್ಕವನ್ನು ಈ ಕೆಳಗೆ ನಮೂದಿಸಿರುವಂತೆ ನಿಗದಿಪಡಿಸಿದೆ.

| ಕ್ರಮ ಸಂಖ್ಯೆ. | ಸ್ನಾತಕೋತ್ತರ ಕೋರ್ಸು | ಖಾಸಗಿ ವೈದ್ಯಕೀಯ ಮತ್ತು ದಂತ ಕಾಲೇಜುಗಳಲ್ಲಿನ ಬೋಧನಾ ಶುಲ್ಕ (ಲಕ್ಷ ರೂ.ಗಳಲ್ಲಿ) |
|---|---|---|
| 1 | 2 | 3 |
| (1) | ಕ್ಲಿನಿಕಲ್ ಕೋರ್ಸುಗಳು | ಎರಡು ಲಕ್ಷಗಳು |
| (2) | ಪ್ಯಾರಾ ಕ್ಲಿನಿಕಲ್ ಕೋರ್ಸುಗಳು | ಐವತ್ತು ಸಾವಿರ |
| (3) | ಪ್ರೀ ಕ್ಲಿನಿಕಲ್ ಕೋರ್ಸುಗಳು | ಇಪ್ಪತ್ತೈದು ಸಾವಿರ |
| (4) | ದಂತ ಕೋರ್ಸುಗಳು | ಒಂದು ಲಕ್ಷ ಇಪ್ಪತ್ತೈದು ಸಾವಿರ |

2) ದಿನಾಂಕ:04/11/1997, ಸಂಖ್ಯೆ.ಆಕುಕ 76 ಎಂಪಿಎಸ್ 97ರ ಸರ್ಕಾರೀ ಆದೇಶದಲ್ಲಿ ನಿಗದಿಪಡಿಸಿರುವ ಇತರೆ ಶುಲ್ಕಗಳನ್ನು ಮೇಲ್ಕಂಡ ಬೋಧನಾ ಶುಲ್ಕದೊಂದಿಗೆ ಪ್ರತಿಯೊಬ್ಬ ಅಭ್ಯರ್ಥಿಯು ಪಾವತಿಸಬೇಕಾಗಿದೆ.

3) ಅದರಂತೆ, ದಿನಾಂಕ:16/04/2004ರ ಅಧಿಸೂಚನೆಯ 10ನೇ ಕಂಡಿಕೆಯಲ್ಲಿ ಸ್ನಾತಕೋತ್ತರ ಕೋರ್ಸುಗಳಿಗೆ ಪ್ರವೇಶ ಪಡೆಯಲು ಅಭ್ಯರ್ಥಿಗಳು ಸಂದಾಯ ಮಾಡಬೇಕಾದ ಬೋಧನಾ ಶುಲ್ಕ ಮತ್ತು ಇನ್ನಿತರ ಶುಲ್ಕಗಳನ್ನು ನಿಗದಿಪಡಿಸಲಾಗಿದೆ.

4) ಮೇಲ್ಕಂಡ ಪರಿಷ್ಕೃತ ಬೋಧನಾ ಶುಲ್ಕವನ್ನು ಸರ್ಕಾರ ಪಾವತಿ ಮಾಡುವ ವಿಚಾರದಲ್ಲಿ ಒಂದು ತಾತ್ವಿಕ ನಿಲುವನ್ನು ರೂಪಿಸಬೇಕಾಗಿದೆ ಎಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರು ಕೋರಿದ್ದರು. ಈ ವಿಚಾರವನ್ನು ದಿನಾಂಕ:23/04/2004ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಕೊಠಡಿಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಲಾಗಿತ್ತು. ಸದರಿ ಹೆಚ್ಚುವರಿ ಶುಲ್ಕವನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ, ವೈದ್ಯಕೀಯ ಶಿಕ್ಷಣ ಇಲಾಖೆಯ ಹಾಗೂ ಇ.ಎಸ್.ಐ ಇಲಾಖೆಯ ವೈದ್ಯಾಧಿಕಾರಿಗಳನ್ನು/ಉಪನ್ಯಾಸಕರುಗಳನ್ನು ಸ್ನಾತ್ತಕೋತ್ತರ ಕೋರ್ಸುಗಳ ವ್ಯಾಸಂಗಕ್ಕಾಗಿ ನಿಯೋಜಿಸಿದ್ದಲ್ಲಿ ಅವರುಗಳು ಪಡೆದುಕೊಂಡ ಹೆಚ್ಚಿನ ಜ್ಞಾನವನ್ನು ಸಾರ್ವಜನಿಕರಿಗೆ ಉಪಯೋಗವಾಗುವುದರಿಂದ ಅದನ್ನು ಸರ್ಕಾರ ಮರುಪಾವತಿ ಮಾಡಬಹುದು ಎಂಬ ತೀರ್ಮಾನವನ್ನು ತೆಗೆದುಕೊಳ್ಳಲಾಯಿತು. 2004-05ನೇ ಸಾಲಿನಲ್ಲಿ ಸೇವಾನಿರತ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ಪದವಿ ಕೋರ್ಸುಗಳ ವ್ಯಾಸಂಗಕ್ಕೆ ನಿಯೋಜಿಸುವುದರಿಂದ ಉಂಟಾಗುವ ಹೆಚ್ಚುವರಿ ಶುಲ್ಕದ ಮರುಪಾವತಿಗೆ ಸಂಬಂಧಿಸಿದಂತೆ ಈ ಆದೇಶವನ್ನು ಹೊರಡಿಸಬೇಕಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 10 ಎಂಪಿಎಸ್ 2004 (ಭಾ-2), ಬೆಂಗಳೂರು, ದಿನಾಂಕ:24ನೇ ಏಪ್ರಿಲ್ 2004.**

5) ವೈದ್ಯಕೀಯ ಶಿಕ್ಷಣ ಇಲಾಖೆಯ ಸೇವಾನಿರತ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ಪದವಿ ಕೋರ್ಸಿನ ವ್ಯಾಸಂಗಕ್ಕಾಗಿ ಪ್ರಸಕ್ತ 2004-05ನೇ ಶೈಕ್ಷಣಿಕ ವರ್ಷದಲ್ಲಿ ನಿಯೋಜಿಸಿ ಅದರಿಂದ ಉಂಟಾಗುವ ಹೆಚ್ಚುವರಿ ಬೋಧನಾ ಶುಲ್ಕವನ್ನು ಸಂಬಂಧಿತ ಖಾಸಗಿ ಕಾಲೇಜುಗಳಿಗೆ ಸರ್ಕಾರದಿಂದ ಮರುಪಾವತಿ ಮಾಡಲು ಮಂಜೂರಾತಿಯನ್ನು ನೀಡಲಾಗಿದೆ. ಸದರಿ ಮಂಜೂರಾತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

(1) ಸ್ನಾತಕೋತ್ತರ ವೈದ್ಯಕೀಯ ಪದವಿ ವ್ಯಾಸಂಗಕ್ಕಾಗಿ ನಿಯೋಜಿತ ಸೇವಾನಿರತ ಉಪನ್ಯಾಸಕರುಗಳು ಸ್ನಾತಕೋತ್ತರ ವ್ಯಾಸಂಗವನ್ನು ಮುಕ್ತಾಯಗೊಳಿಸಿದ ನಂತರ ಕನಿಷ್ಟ 10 ವರ್ಷಗಳ ಸೇವೆಯನ್ನು ಸರ್ಕಾರದಲ್ಲಿ ಸಲ್ಲಿಸುವುದಕ್ಕೆ ಬದ್ಧರಾಗಿ ಮುಚ್ಚಳಿಕೆಯನ್ನು (Bond) ಸರ್ಕಾರಕ್ಕೆ ಬರೆದುಕೊಡಬೇಕು.

(2) 10 ವರ್ಷಗಳ ಅವಧಿಯಲ್ಲಿ ಅಂತಹ ಉಪನ್ಯಾಸಕರು ರಾಜಿನಾಮೆ ನೀಡಿದಲ್ಲಿ ಅಥವಾ ಅನಧಿಕೃತವಾಗಿ ಗೈರುಹಾಜರಾದಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಮರುಪಾವತಿಸಿದ ಬೋಧನಾ ಶುಲ್ಕ ಮತ್ತು ನಿಯೋಜನಾ ಅವಧಿಯಲ್ಲಿ ಪಡೆದಿರುವ ಸಂಬಳ ಮತ್ತು ಇನ್ನಿತರ ಭತ್ಯೆ ಹಾಗೂ ಉಪಲಬ್ಧಗಳನ್ನು ಬಡ್ಡಿ ಸಮೇತ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು.

(3) ಸ್ನಾತಕೋತ್ತರ ವ್ಯಾಸಂಗವನ್ನು ಮಧ್ಯದಲ್ಲಿ ಮೊಟಕುಗೊಳಿಸಿದ್ದಲ್ಲಿ ಅವರಿಗೆ ಪಾವತಿಸಲಾದ ಬೋಧನಾ ಶುಲ್ಕ ಮತ್ತು ಈಗಾಗಲೇ ಜಾರಿಯಲ್ಲಿರುವಂತೆ ಇತರ ದಂಡ ಶುಲ್ಕಗಳನ್ನು ಅವರಿಂದ ವಸೂಲಿ ಮಾಡತಕ್ಕದ್ದು.

(4) ಮೇಲ್ಕಂಡ ಹೆಚ್ಚುವರಿ ಬೋಧನಾ ಶುಲ್ಕದ ಮರುಪಾವತಿಗೆ ತಗಲುವ ಹೆಚ್ಚುವರಿ ವೆಚ್ಚವನ್ನು "2210-01-110-1-18-071-ಕಟ್ಟಡ ವೆಚ್ಚಗಳು (ಯೋಜನೇತರ)" ಲೆಕ್ಕ ಶೀರ್ಷಿಕೆಯಿಂದ ಮರುಹೊಂದಾಣಿಕೆ ಮೂಲಕ ಭರಿಸತಕ್ಕದ್ದು.

6) ದಿನಾಂಕ:24/04/2004, ಸಂಖ್ಯೆ:ಆಇ 799 ವೆಚ್ಚ(5) 2004ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಸಹಮತಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ವಿ. ನಂಜುಂಡೇಗೌಡ**

ಸರ್ಕಾರದ ಉಪ ಕಾರ್ಯದರ್ಶಿ,

ಪಿ.ಆರ್.496 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಸಿ. ಜಿ. ಹಲಸಿ, ನಿವೃತ್ತ ತೋಟಗಾರಿಕಾ ಉಪ ನಿರ್ದೇಶಕರು, (ಜಿಪ) ಬೆಳಗಾಂರವರ ವಿರುದ್ದದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ :**
1. ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರ ಸಂಖ್ಯೆ: ತೋಇ: ಆ:ಸಿ:ವಿನಿ10-2:67: 2001-02 ದಿನಾಂಕ: 12.11.2001.
2. ಸರ್ಕಾರದ ಕಾರಣ ಕೇಳುವ ಪತ್ರ ಸಂಖ್ಯೆ: ಕೃತೋಇ 349 ತೋಸೇಪ 2001 ದಿನಾಂಕ: 27.11.2001.
3. ಶ್ರೀ ಸಿ. ಜಿ. ಹಲಸಿ, ತೋಟಗಾರಿಕೆ ಉಪ ನಿರ್ದೇಶಕರು (ನಿವೃತ್ತ) ಬೆಳಗಾಂ ಇವರ ಸ್ವೀಕೃತಿ/ಲಿಖಿತ ಹೇಳಿಕೆ ದಿನಾಂಕ: 7.12.2001.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ 1ರಲ್ಲಿ ಓದಲಾಗಿರುವ ದಿನಾಂಕ: 12.11.2001ರ ಪತ್ರದಲ್ಲಿ ಶ್ರೀ ಸಿ. ಜಿ. ಹಲಸಿ, ನಿವೃತ್ತ ತೋಟಗಾರಿಕೆ ಉಪ ನಿರ್ದೇಶಕರು, ಈ ಹಿಂದೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪ) ಶಿರಸಿ ಆಗಿ ಕಾರ್ಯನಿರ್ವಹಿಸಿದ ಅವಧಿಯಲ್ಲಿ ರಾಜ್ಯವಲಯದ ಯೋಜನೆಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡ ಲೋಪಗಳನ್ನು ಎಸಗಿರುತ್ತಾರೆಂದು ತೋಟಗಾರಿಕೆ ನಿರ್ದೇಶಕರು ವರದಿ ಮಾಡಿದ ಹಿನ್ನೆಲೆಯಲ್ಲಿ, ಕ್ರಮಾಂಕ 2 ರಲ್ಲಿ ಓದಲಾಗಿರುವ ದಿನಾಂಕ 27.11.2001ರ ಪತ್ರದಲ್ಲಿ ಕಾರಣ ಕೇಳಿ ಪತ್ರದೊಂದಿಗೆ ಆರೋಪ ಪಟ್ಟಿಯನ್ನು ಜಾರಿ ಮಾಡಲಾಗಿತ್ತು.

ಶ್ರೀ ಸಿ. ಜಿ. ಹಲಸಿ, ನಿವೃತ್ತ ತೋಟಗಾರಿಕೆ ಉಪ ನಿರ್ದೇಶಕ ಇವರು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರಾಗಿ ಶಿರಸಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ 1993-94 ರಿಂದ 1996-97ನೇ ಸಾಲಿನವರೆಗೆ ರಾಜ್ಯವಲಯದ ಯೋಜನೆಯಡಿಯಲ್ಲಿ ಖರೀದಿಸಲಾದ ವಿವಿಧ ಸಾಮಗ್ರಿಗಳನ್ನು ಫಲಾನುಭವಿಗಳಿಗೆ ವಿತರಿಸಿದ ಬಗ್ಗೆ ಮತ್ತು ಸಾಂಬಾರು ಬೆಳೆ ಮತ್ತು ಅಡಿಕೆ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸಿ ಈ ಯೋಜನೆಗಳ ಅಡಿಯಲ್ಲಿ ಯೋಜನೆಯ ಮಾರ್ಗಸೂಚಿ ಪ್ರಕಾರ ಶೇಕಡ 50 ಭಾಗದ ಹಣವನ್ನು ರೈತರಿಂದ ವಸೂಲಿ ಮಾಡಿ ಸರ್ಕಾರಕ್ಕೆ ಮತ್ತು ಸಂಬಂಧಿಸಿದ ಸಂಸ್ಥೆಗಳಿಗೆ ಜಮಾ ಮಾಡದೇ ಸರ್ಕಾರಿ ಹಣಕಾಸಿನ ನಷ್ಟವಾಗಲು ಕಾರಣರಾಗಿರುತ್ತಾರೆ.

ಸದರಿ ಅಧಿಕಾರಿಯವರು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪ) ಶಿರಸಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಪಶ್ಚಿಮಘಟ್ಟ ಅಭಿವೃದ್ಧಿ ಯೋಜನೆಯಡಿಯಲ್ಲಿ ಅಭಿವೃದ್ಧಿಪಡಿಸಿದ ಸಸ್ಯಾಗಾರದಲ್ಲಿನ ಗಿಡಗಳನ್ನು ಫಲಾನುಭವಿಗಳಿಗೆ ವಿತರಿಸದೆ ಆರ್ಥಿಕ ನಷ್ಟ ಉಂಟು ಮಾಡಿರುವುದಲ್ಲದೇ, ದಾಸ್ತಾನಿನಲ್ಲಿರುವ ಸಾಮಗ್ರಿಗಳನ್ನು ರೈತರಿಗೆ ವಿತರಣೆ ಮಾಡದೇ ಹಾಗೆಯೇ ಹಾಳಾಗಲು ಬಿಟ್ಟು ವಸೂಲಾತಿಗೆ ಸೂಚಿಸಿರುತ್ತಾರೆ.

ಶಿರಸಿ ತಾಲ್ಲೂಕಿನ ಜಿಲ್ಲಾ ಪಂಚಾಯತ್ ಯೋಜನೆಗಳ ಅಡಿಯಲ್ಲಿ ಯೋಜನೆಗಳ ಮಾರ್ಗಸೂಚಿ ಪ್ರಕಾರ ಫಲಾನುಭವಿಗಳಿಗೆ ವಿತರಿಸಿದ ಸಾಮಗ್ರಿಗಳಲ್ಲಿ ಶೇಕಡ 75 ಹಾಗೂ ಶೇಕಡ 50 ಭಾಗ ಹಣವನ್ನು ಸರ್ಕಾರಕ್ಕೆ ಮತ್ತು ಸರಬರಾಜು ಸಂಸ್ಥೆಗಳಿಗೆ ಜಮಾ ಮಾಡದೇ ಹಣದ ದುರ್ವಿನಿಯೋಗಕ್ಕೆ ಕಾರಣರಾಗಿರುತ್ತಾರೆ.

ಸದರಿ ಅಧಿಕಾರಿಯವರು 1997-98ನೇ ಸಾಲಿನಲ್ಲಿ ನಗದೀಕರಿಸಿದ ಎ.ಸಿ. ಬಿಲ್ಲುಗಳ ಮೊತ್ತಕ್ಕೆ ಸಕಾಲದಲ್ಲಿ ಎನ್.ಡಿ.ಸಿ. ಬಿಲ್ಲುಗಳನ್ನು ಸಲ್ಲಿಸದೇ ಹಾಗೂ ಸದರಿ ಬಿಲ್ಲುಗಳ ಲಗತ್ತಿಸಿದ ಓಚರ್‌ಗಳಿಗೆ ಮಂಜೂರಾತಿ ನೀಡದೇ/ಆಕ್ಷೇಪಣೆಗಳನ್ನು ಸರಿಪಡಿಸದೇ ಕರ್ತವ್ಯ ಲೋಪವನ್ನು ಎಸಗಿ, ಅವುಗಳಿಗೆ ಸಂಬಂಧಿಸಿದ ಮೊತ್ತಕ್ಕೆ ಹೊಣೆಗಾರರಾಗಿರುತ್ತಾರೆ.

ಸದರಿ ಅಧಿಕಾರಿಯವರು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪ) ಶಿರಸಿಯಾಗಿದ್ದಾಗ ದಾಸ್ತಾನು ವಹಿ ಪುಟ ಸಂಖ್ಯೆ 2 ಮತ್ತು 3 ರಲ್ಲಿ ದಾಸ್ತಾನು ಪಡೆದು ಸದರಿ ದಾಸ್ತಾನನ್ನು ಉಪಯೋಗಿಸಿದ ಬಗ್ಗೆ ಯಾವುದೇ ವಿವರಗಳನ್ನು ನೀಡದೇ ಲೋಪ ಎಸಗಿ ಬೃಹತ್ ಪ್ರಮಾಣದ ಸರ್ಕಾರಿ ಹಣ ದುರುಪಯೋಗವಾಗಲು ಕಾರಣರಾಗಿರುತ್ತಾರೆ ಮತ್ತು 96-97ನೇ ಸಾಲಿನ ದಿನವಹಿ ದಾಸ್ತಾನುವಹಿ ಪುಟ ಸಂಖ್ಯೆ 1 ರಲ್ಲಿ ಪಡೆದ ದಾಸ್ತಾನನ್ನು ವಿತರಣೆ ಮಾಡಿರುವುದಕ್ಕೆ ವಿವರಣೆ ನೀಡದೇ ಹಣ ದುರುಪಯೋಗವಾಗಲು ಕಾರಣರಾಗಿರುತ್ತಾರೆ.

ಮೇಲ್ಕಂಡ ಆರೋಪಗಳಿಗೆ ಸಂಬಂಧಿಸಿದಂತೆ ಶ್ರೀ ಸಿ. ಜಿ. ಹಲಸಿ, ನಿವೃತ್ತ ತೋಟಗಾರಿಕೆ ಉಪ ನಿರ್ದೇಶಕರು ಇವರು, ಮೇಲೆ ಕ್ರಮಾಂಕ-3 ರಲ್ಲಿ ಓದಲಾಗಿರುವ ದಿನಾಂಕ: 7.12.2001ರ ಪತ್ರದ ಜೊತೆ ತಮ್ಮ ಹೇಳಿಕೆಯನ್ನು ಸಲ್ಲಿಸಿ ಅವರ ಮೇಲೆ ಹೊರಿಸಲಾದ ಎಲ್ಲಾ ಆರೋಪಗಳನ್ನು ತಳ್ಳಿ ಹಾಕಿರುತ್ತಾರೆ. ಸದರಿ ಅಧಿಕಾರಿಯವರು ತಮ್ಮ ಮೇಲಿನ ಆರೋಪಗಳಿಗೆ ನೀಡಿರುವ ಹೇಳಿಕೆಗಳನ್ನು ಆರೋಪಗಳೊಂದಿಗೆ ಪರಿಶೀಲಿಸಿದಾಗ ಅವರ ಹೇಳಿಕೆಗಳು ತೃಪ್ತಿಕರವಾಗಿ ಕಂಡು ಬರುವುದಿಲ್ಲ ಮತ್ತು ಸತ್ಯಕ್ಕೆ ದೂರವಾಗಿದೆ ಎಂಬುದಾಗಿ ಮೇಲ್ನೋಟಕ್ಕೆ ತೋರುತ್ತದೆ. ಆದ್ದರಿಂದ ಈ ಪ್ರಕರಣದಲ್ಲಿನ ಆರೋಪಗಳಿಗೆ ಸಂಬಂಧಿಸಿದಂತೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು, ಶ್ರೀ ಸಿ.ಜಿ.ಹಲಸಿ, ನಿವೃತ್ತ ತೋಟಗಾರಿಕೆ ಉಪ ನಿರ್ದೇಶಕರುರವರನ್ನು ಇಲಾಖಾ ವಿಚಾರಣೆಗೆ ಗುರಿಪಡಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ: 349 ತೋಸೇಪ 2001 ಬೆಂಗಳೂರು, ದಿನಾಂಕ: 24/26ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಸಿ.ಜಿ. ಹಲಸಿ ನಿವೃತ್ತ ತೋಟಗಾರಿಕೆ ಉಪ ನಿರ್ದೇಶಕರು ಇವರು ಈ ಹಿಂದೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ಜಿಪಂ) ಶಿರಸಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ 1992-93ನೇ ಸಾಲಿನಿಂದ 1996-97ನೇ ಸಾಲಿನವರೆಗೆ ರಾಜ್ಯವಲಯ ಯೋಜನೆಯಡಿಯಲ್ಲಿ ಖರೀದಿಸಲಾದ ವಿವಿಧ ಸಾಮಗ್ರಿಗಳನ್ನು ಫಲಾನುಭವಿಗಳಿಗೆ ವಿತರಿಸದೇ ಲೋಪವೆಸಗಿ ಸರ್ಕಾರಿ ಹಣ ದುರುಪಯೋಗಪಡಿಸಿಕೊಂಡಿರುವ ಆರೋಪಗಳಿಗೆ ಸಂಬಂಧಿಸಿದಂತೆ ಅವರ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ಎಂ. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಮತ್ತು ಶ್ರೀ ಎಸ್. ಆರ್. ಡಿಸೋಜಾ, ಅಧೀಕ್ಷಕರು, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಚೇರಿ (ಜಿಪ) ಕುಮಟಾ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ತೋಟಗಾರಿಕೆ ನಿರ್ದೇಶಕರ ಕಚೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಚೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು. ಹಾಗೆಯೇ ಸಂಬಂಧಿಸಿದ ಕಚೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸುವುದು.

ಈ ಪ್ರಕರಣದ ವಿಚಾರಣೆಗಾಗಿ ರೂ.5,000/- (ರೂ. ಐದು ಸಾವಿರ ಮಾತ್ರ)ಗಳ ಸಂಚಿತ ಸಂಭಾವನೆಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ತೋಟಗಾರಿಕೆ ನಿರ್ದೇಶಕರು ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು 3 ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 491 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## INFRASTRUCTURE DEVELOPMENT SECRETARIAT

**Subject :** Release of funds in 2003-04 for the Hassan-Mangalore Gauge Conversion Project.

**Read :**
1. G. O. No. IDD 11 NSW 2001, dated: 22.10.2001
2. G. O. No. IDD 11 NSW 2001, dated: 31.03.2003
3. G. O. No. 41 NSW 2003, dated: 12.9.2003
4. G. O. No. IDD 41 NSW 2003, dated: 4.11.2003.
5. Letter No. W. 63/B/CN/BNC/Genl. dated: 5.4.2004 from the Chief Engineer (Construction), SW Railway, Bangalore.

**Preamble:**

1. In the Government Order read at (1) above, Government of Karnataka (GoK) had accorded sanction for incorporating a Special Purpose Vehicle (SPV) called the Hassan-Mangalore Rail Development Company (HMRDC) for implementing Hassan Mangalore Gauge Conversion Project (HMGCP) GoK and Ministry of Railways are expected to invest Rs. 45 crores each in the equity of HMRDC either directly or through K-RIDE.

2. In the Government Order read at (2) above Rs. 6.00 crores have been released to Railways towards the expenditure on the HMGCP, subject to condition that the said amount would be treated as the equity of Government of Karnataka in HMRDC after it is duly established.

3. On 29th April 2003, the Cabinet Committee on Economic Affairs, Government of India have approved formation of HMRDC. HMRDC Ltd. has since been incorporated on 1.07.2003 under the Companies Act 1956. The necessary Project agreements would be signed shortly.

4. Meanwhile, in the letter read at 3 above, a request for a further release of Rs. 6 crore has been made. Gok has considered the matter and decided to release Rs. 2 crores as equity amount of Government of Karnataka in the HMRDC in addition to Rs. 6.00 crores already released on 31.03.2003 Hence this order.

5. In the G.O. dated 4.11.2003 read at (4) above, a further release of Rs. 5.00 Crores towards the expenditure on HMGCP has been made as advance towards equity of GoK in HMRDC.

6. In the letter dated 5th April 2004 read at (6) above the CE (Con), SWR has stated that the Railways have so far spent Rs. 70.00 Crores and the State Government has only deposited Rs. 23.00 Crores, thereby there is deficit of Rs. 45.00 Crores and the Railways have spent Rs. 47.00 Crores till 1.4.2003 i.e. Rs. 2.00 Crores in excess. As such he has requested the State Government to release the balance of Rs. 12.00 Crores immediately to complete the work of Sakleshpur-Subramanya Road section within the schedule time.

7. Gok has considered the matter and decided to release further amount of Rs. 5.00 Crores as equity of GoK in HMRDC. Hence the following order.

**Government Order No. IDD 41 NSW 2003 Bangalore dated: 28th April 2004**

1. In the circumstances explained in the preamble, the Government of Karnataka is pleased to sanction the release of Rs. 5.00 crores (Rupees Five crores only) towards the expenditure on the HMGCP. This amount would subsequently be converted as the equity of GoK in HMRDC.
2. The Director, HMRDC is authorized to draw the said amount on Payee's Receipt duly countersigned by the Under Secretary to Government, Infrastructure Development Department and deposit the same with the Financial Adviser and Chief Accounts Officer (Construction), Southern Railways, Bangalore.
3. This expenditure shall be met out of the Head of Account "5465-01-190-3-02-211 Hassan-Mangalore Gauge Conversion Project Investments (Plan)".
4. This Order issues with the concurrence of Finance Department vide its U.O. Note No. FD 733/Exp-I/2004 dated: 28.04.2004.

By Order and in the name of the Governor of Karnataka,

**T. B. RENUKA PRASAD**

Under Secretary to Government

Infrastructure Development Department.

PR-490

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಧಾರವಾಡ ಜಿಲ್ಲೆ ಕಲಘಟಗಿ ತಾಲ್ಲೂಕು ಸಂಗಟಿಕೊಪ್ಪ ಗ್ರಾಮದ ಕಸ್ತೂರಿಬಾ ಸಹಕಾರ ಸಮುದಾಯ ಬೇಸಾಯ ಸಂಘ ನಿಯಮಿತ ಇವರಿಗೆ ಸಂಗಟಿಕೊಪ್ಪ ಗ್ರಾಮದ ಅರಣ್ಯ ಸರ್ವೆ 6 ರಲ್ಲಿ 90.00 ಎಕರೆ ಅರಣ್ಯ ಭೂಮಿಯನ್ನು ಗುತ್ತಿಗೆ ನೀಡಿದ್ದ ಬಗ್ಗೆ ಆದೇಶ ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**

1 ಸರ್ಕಾರಿ ಆದೇಶ ಸಂಖ್ಯೆ: ಎಎಫ್‌ಡಿ 185 ಎಫ್‌ಜಿಎಲ್ 66 ದಿನಾಂಕ: 20-1-1967.

2 ಸರ್ಕಾರಿ ಆದೇಶ ಸಂಖ್ಯೆ: ಎಎಫ್‌ಡಿ 100 ಎಫ್‌ಜಿಎಲ್ 76 ದಿನಾಂಕ: 20-11-1976.

3 ದಿನಾಂಕ: 1.7.1983 ರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಎಫ್‌ಎಫ್‌ಡಿ 40 ಎಫ್‌ಎಲ್‌ಎಲ್ 82.

4 ಸರ್ಕಾರಿ ಆದೇಶ ಸಂಖ್ಯೆ: ಎಫ್‌ಎಫ್‌ಡಿ 40 ಎಫ್‌ಎಲ್‌ಎಲ್ 82. ದಿನಾಂಕಃ 10–5–1984.

5 ರಿಟ್ ಅರ್ಜಿ ಸಂಖ್ಯೆ: 15311/1987 ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿ: 2.12.1996 ರಂದು ನೀಡಿದ ಆದೇಶ.

6 ದಿನಾಂಕಃ 15.5.1999 ರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಅಪಜೀ 178 ಎಫ್‌ಜಿಎಲ್ 96.

7 ದಿನಾಂಕಃ 16.10.2001 ರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಅಪಜೀ 178 ಎಫ್‌ಜಿಎಲ್ 96.

8 ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ದಿನಾಂಕ: 6.5.2003 ರ ಪತ್ರ ಸಂಖ್ಯೆ: ಎ5(2)ಜಿಎಫ್‌ಎಲ್:3536/ಧಾವಿ:96–97.

9 ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರ ದಿನಾಂಕಃ 19–11–2003ರ ಪತ್ರ ಸಂಖ್ಯೆ: ಡಿಎವೈ: 46: ಜೆಎಂಸಿ: 2003–04.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕಃ 20–1–1967 ರ ಆದೇಶದಲ್ಲಿ ಧಾರವಾಡ ಜಿಲ್ಲೆ ಕಲಘಟಗಿ ತಾಲ್ಲೂಕು ಸಂಗಟಿಕೊಪ್ಪ ಗ್ರಾಮದ ಅರಣ್ಯ ಸರ್ವೆ ನಂ. 6 ರಲ್ಲಿ ಕಸ್ತೂರಿ ಬಾ ಸಹಕಾರಿ ಸಮುದಾಯ ಬೇಸಾಯ ಸಂಘ ನಿಯಮಿತ, ಸಂಗಟಿಕೊಪ್ಪ ಇವರಿಗೆ 150 ಎಕರೆ ಅರಣ್ಯ ಪ್ರದೇಶವನ್ನು 50 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿತ್ತು. ಸದರಿ ಸಂಘವು ಗುತ್ತಿಗೆ ಹಣವನ್ನು ಕಟ್ಟದೇ ಇದ್ದುದರಿಂದ ಹಾಗೂ ಅರಣ್ಯ ಭೂಮಿಯನ್ನು ಬೇಸಾಯ ಮಾಡದೇ ಇದ್ದುದರಿಂದ ಮೇಲೆ (2) ರಲ್ಲಿ ಓದಲಾದ ದಿನಾಂಕಃ 20–11–1976ರ ಆದೇಶದಲ್ಲಿ ಮೇಲೆ (1) ರಲ್ಲಿ ಓದಲಾದ ದಿನಾಂಕಃ 20–1–1967 ರ ಆದೇಶವನ್ನು ಮಾರ್ಪಡಿಸಿ 90 ಎಕರೆ ಜಮೀನನ್ನು ಮಾತ್ರ ಸದರಿ ಸಂಘಕ್ಕೆ ಎರಡು ವರ್ಷಗಳ ಅವಧಿಯಲ್ಲಿ ಬೇಸಾಯ ಮಾಡಬೇಕೆನ್ನುವ ಷರತ್ತಿಗೆ ಒಳಪಟ್ಟು ಆದೇಶ ಹೊರಡಿಸಲಾಯಿತು. ಸದರಿ ಸಂಘವು ಗುತ್ತಿಗೆ ಹಣವನ್ನು ಸದಸ್ಯರಿಂದ ವಸೂಲಿ ಮಾಡಿ ಸರ್ಕಾರಕ್ಕೆ ತುಂಬದೇ ಇದ್ದುದಕ್ಕೆ ಮೇಲೆ (3) ರಲ್ಲಿ ಓದಲಾದ ದಿನಾಂಕಃ 1–7–1983ರಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೀಡಲಾಯಿತು. ಆದರೆ ಸಂಘವು ಈ ನೋಟೀಸ್‌ಗೆ ಉತ್ತರಿಸಲಿಲ್ಲ. ನಂತರ ಮೇಲೆ (4) ರಲ್ಲಿ ಓದಲಾದ ದಿನಾಂಕಃ 10–5–1984 ರ ಆದೇಶದಲ್ಲಿ ಗುತ್ತಿಗೆಯನ್ನು ರದ್ದುಪಡಿಸಲಾಯಿತು.

ದಿನಾಂಕಃ 10–5–1984 ರ ಈ ಆದೇಶದ ವಿರುದ್ಧ ಸದರಿ ಸಂಘದವರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 15311/1987 ರಲ್ಲಿ ಪ್ರಕರಣವನ್ನು ದಾಖಲಿಸಿದರು. ಈ ಬಗ್ಗೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಮೇಲೆ (5) ರಲ್ಲಿ ಓದಲಾದ ದಿನಾಂಕಃ 2–12–1996 ರ ಆದೇಶದಲ್ಲಿ ಜಮೀನು ಗುತ್ತಿಗೆ ನೀಡಿರುವ ಆದೇಶವನ್ನು ರದ್ದುಪಡಿಸುವ ಮೊದಲು ನಿಯಮಾನುಸಾರ ರಿಟ್ ಅರ್ಜಿದಾರರಿಗೆ ಹಾಗೂ ಪ್ರತಿವಾದಿಗಳಾದ ಕ್ರಮ ಸಂಖ್ಯೆ: 4 ರಿಂದ 17 ರಲ್ಲಿನವರೆಗೆ ಹೊಸದಾಗಿ ಕಾರಣ ಕೇಳುವ ನೋಟೀಸ್ ನೀಡುವಂತೆ ನಿರ್ದೇಶನ ನೀಡಿದೆ. ಅದರಂತೆ ಮೇಲೆ (6) ರಲ್ಲಿ ಓದಲಾದ ದಿನಾಂಕಃ 15–5–1999 ರಂದು ಅರ್ಜಿದಾರರಿಗೆ ಹಾಗೂ ಪ್ರತಿವಾದಿಗಳಿಗೆ ಕಾರಣ ಕೇಳುವ ನೋಟೀಸ್‌ನ್ನು ನೀಡಿ 15 ದಿನಗಳ ಒಳಗಾಗಿ ಸಮಜಾಯಿಷಿ ನೀಡಬೇಕೆಂದು ಕೋರಲಾಯಿತು. ಪ್ರತಿವಾದಿಗಳು ದಿನಾಂಕ: 5–6–1999 ರಂದು ನೋಟೀಸ್‌ಗೆ ಉತ್ತರಿಸಿ ಸರ್ಕಾರದ ಜೊತೆ ಒಪ್ಪಂದ ಮಾಡಿಕೊಳ್ಳಲು ಹಾಗೂ ಕಟ್ಟಬೇಕಾದ ಹಣವನ್ನು ಕಟ್ಟಲು ಸಿದ್ಧರಿದ್ದೇವೆ ಎಂದು ತಿಳಿಸಿದ್ದಾರೆ ಹಾಗೂ ಸಂಘವು ಅಸ್ತಿತ್ವದಲ್ಲಿಲ್ಲ ಎಂದು ತಿಳಿಸಿದ್ದಾರೆ. ಸಂಘದ ಪದಾಧಿಕಾರಿಗಳು ಮತ್ತು ಪ್ರತಿವಾದಿಗಳು ಪ್ರತ್ಯೇಕವಾದ ಹೇಳಿಕೆಗಳನ್ನು ನೀಡಿದ್ದಾರೆ.

ಅನಂತರ ಈ ವಿಷಯದ ಬಗ್ಗೆ ಚರ್ಚಿಸಲು ದಿನಾಂಕಃ 9–7–2001 ರಂದು ಮಾನ್ಯ ಅರಣ್ಯ ಸಚಿವರ ಅಧ್ಯಕ್ಷತೆಯಲ್ಲಿ ಒಂದು ಸಭೆಯನ್ನು ನಡೆಸಲಾಯಿತು. ಸದರಿ ಸಭೆಯಲ್ಲಿ ಸಂಘದವರ ಹಾಗೂ ಇತರ ಸದಸ್ಯರುಗಳ ಅಹವಾಲುಗಳನ್ನು ಕೇಳಿದ ನಂತರ, ಸಂಘಕ್ಕೆ ಹಾಗೂ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಮೇಲೆ ತಿಳಿಸಿದ ಪ್ರಕರಣದ 15 ಪ್ರತಿವಾದಿಗಳಿಗೆ ಮತ್ತೊಂದು ನೋಟೀಸ್‌ನ್ನು ನೀಡಲು ತೀರ್ಮಾನಿಸಲಾಯಿತು. ಅದರಂತೆ ಮೇಲೆ (7) ರಲ್ಲಿ ಓದಲಾದ ದಿನಾಂಕಃ 16–10–2001 ರಂದು ಕಾರಣ ಕೇಳುವ ನೋಟೀಸ್‌ನ್ನು ಹೊರಡಿಸಲಾಯಿತು ಹಾಗೂ 15 ದಿನಗಳ ಒಳಗಾಗಿ ಸಮಜಾಯಿಸಿ ಉತ್ತರ ನೀಡುವಂತೆ ಕೋರಲಾಯಿತು. ಸದರಿ ನೋಟೀಸ್‌ಗೆ ಸಂಘದವರು ದಿನಾಂಕಃ 4–11–2001 ರಂದು ಉತ್ತರಿಸಿ ಸರ್ಕಾರಿ ಆದೇಶದಲ್ಲಿರುವ ಕರಾರನ್ನು ಸಂಘ ಒಪ್ಪಿಕೊಳ್ಳುತ್ತದೆ, ಜಮೀನನ್ನು ಮಂಜೂರು ಮಾಡುವಂತೆ ಕೋರಿದೆ. ನೋಟೀಸ್ ಪಡೆದ ಇನ್ನಿತರರು ಸಂಘಕ್ಕೆ ಕಾಲಕಾಲಕ್ಕೆ ವಿಧಿಸಿದ್ದ ತೆರಿಗೆಗಳನ್ನು ಪಾವತಿ ಮಾಡಿದ್ದೇವೆ. ಈ ಹಣವನ್ನು ಸಂಘವು ಸರ್ಕಾರಕ್ಕೆ ಸಂದಾಯ ಮಾಡಿಲ್ಲ. ಸಂಘ ಈಗಾಗಲೇ ಲಿಕ್ವಿಡೇಟ್ ಆಗಿದೆ. ಸಂಘದ ಯಾವುದೇ ಸದಸ್ಯರು ಜಮೀನು ಸಾಗುವಳಿ ಮಾಡಿಲ್ಲ ಎಂದು ತಿಳಿಸುತ್ತಾ ಜಮೀನು ಸಾಗುವಳಿ ಮಾಡಲು ಮಂಜೂರು ಮಾಡುವಂತೆ ಕೋರಿದ್ದಾರೆ.

ಈ ಬಗ್ಗೆ ಚರ್ಚಿಸಲು ದಿ: 24–1–2002 ರಂದು ಮಾನ್ಯ ಅರಣ್ಯ ಸಚಿವರ ಅಧ್ಯಕ್ಷತೆಯಲ್ಲಿ ಒಂದು ಸಭೆಯನ್ನು ಕರೆಯಲಾಯಿತು. ಸಂಘದ ಪರವಾಗಿ ಏಳು ಜನರು ಸಭೆಯಲ್ಲಿ ಹಾಜರಿದ್ದರು. ಸುದೀರ್ಘ ಚರ್ಚೆ ನಂತರ ಈ ಕೆಳಕಂಡಂತೆ ತೀರ್ಮಾನಿಸಲಾಯಿತು.

1. ಸಹಕಾರ ಇಲಾಖೆಯ ಮುಖ್ಯ ಅಧಿಕಾರಿಯಿಂದಃ
   ಅ) ಸಂಘ ನೋಂದಣಿ ಆಗಿದ್ದು ಯಾವಾಗ? ಆಗಿನ ಮತ್ತು ಈಗಿರುವ ಸದಸ್ಯರ ವಿವರ, ಸದಸ್ಯರು ಈಗ ಮರಣ ಹೊಂದಿದ್ದರೆ ಈಗ ಸದಸ್ಯರಾಗಿರುವವರ ವಾರಸುದಾರರು.
   ಆ) ಹೈ ಕೋರ್ಟಿನಲ್ಲಿ ರದ್ದು ಆದೇಶವನ್ನು ಪ್ರಶ್ನಿಸಿ ಅರ್ಜಿ ಹಾಕಿದ್ದ 15 ಜನರಲ್ಲಿ ಎಷ್ಟು ಜನ ಸಂಘದ ಸದಸ್ಯರಾಗಿದ್ದರು. ವಿವರ ಪಡೆಯುವುದು.
2. ಸಂಘದ ಯಾವ ಯಾವ ನಿಜವಾದ ಸದಸ್ಯರು ಬೇಸಾಯ ಮಾಡಿಕೊಂಡಿದ್ದಾರೆ ಎಂಬ ಬಗ್ಗೆ ವಿವರಗಳನ್ನು ಪಡೆಯುವುದು.
3. ಜಿಲ್ಲಾಧಿಕಾರಿಗಳು, ಧಾರವಾಡ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಧಾರವಾಡ ಅವರಿಂದ ಸ್ಥಳ ಪರಿಶೀಲನೆ ನಡೆಸಿ, ವಾಸ್ತವಿಕ ಪರಿಸ್ಥಿತಿಯ ಬಗ್ಗೆ ವರದಿ ಪಡೆದುಕೊಳ್ಳುವುದು.

4. ಈ ರೀತಿ ವರದಿ ಪಡೆದುಕೊಂಡ ನಂತರ, ಭೂಮಿ ಮಂಜೂರು ಮಾಡಿದ ದಿನದಿಂದ ಯಾರು–ಯಾರು ಬೇಸಾಯ ಮಾಡಿಕೊಂಡಿದ್ದಾರೋ ಅಂತಹ ಸದಸ್ಯರಿಗೆ ಜಮೀನು ಮಂಜೂರು ಮಾಡುವುದನ್ನು ಪರಿಶೀಲಿಸುವುದು.
5. ಒಂದು ವೇಳೆ, ಮೂಲ ಸದಸ್ಯರು ಮರಣ ಹೊಂದಿದ್ದು ಅವರ ಕಾನೂನು ಸಮ್ಮತ ವಾರಸುದಾರರು ಬೇಸಾಯ ಮುಂದುವರಿಸಿಕೊಂಡು ಬಂದಿದ್ದರೆ, ಅವರುಗಳ ಹೆಸರನ್ನು ಖಚಿತ ಪಡಿಸಿಕೊಂಡು ಅವರಿಗೆ ಮಂಜೂರು ಮಾಡುವುದನ್ನು ಪರಿಶೀಲಿಸುವುದು.

ಸದರಿ ಸಭೆಯ ನಿರ್ಣಯದಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ರವರಿಂದ ಹಾಗೂ ಸಹಕಾರ ಸಂಘಗಳ ನಿಬಂಧಕರಿಂದ ವರದಿಯನ್ನು ಕೋರಲಾಯಿತು.

ಮೇಲೆ (8) ರಲ್ಲಿ ಓದಲಾದ ದಿನಾಂಕಃ 6–5–2003 ರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ರವರ ಪತ್ರದಲ್ಲಿ ಪ್ರಶ್ನಿತ ಅರಣ್ಯ ಜಮೀನಿನ ಸ್ಥಳವನ್ನು ದಿನಾಂಕಃ 12–9–2002 ರಂದು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ, ಧಾರವಾಡ ವಿಭಾಗ ಇವರು ಜಂಟಿ ಪರಿಶೀಲನೆ ಮಾಡಿದ್ದಾರೆ. ಅವರ ಪರಿಶೀಲನಾ ವರದಿಯಂತೆ ಒಟ್ಟು 53 ಎಕರೆ 5 ಗುಂಟೆ ಜಮೀನು ಸಾಗುವಳಿ ಮಾಡುತ್ತಿದ್ದು ಹತ್ತಿ ಮತ್ತು ಭತ್ತವನ್ನು ಬೆಳೆದಿರುತ್ತಾರೆ. ಈ ಜಮೀನಿನಲ್ಲಿ 18 ಜನ ಸಾಗುವಳಿ ಮಾಡುತ್ತಿದ್ದು ಇನ್ನೊಬ್ಬ ವ್ಯಕ್ತಿಯು ಕೂಡ ಸಾಗುವಳಿ ಮಾಡುತ್ತಿರುವುದು ತಿಳಿದು ಬಂದಿದೆ. ಸದರಿ ಸಂಘವು ದಿನಾಂಕಃ 20–5–1967 ರಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959 ರ ನೋಂದಣಿಯಾಗಿರುತ್ತದೆ. ಆದರೆ ಸಂಘವು ಯಾವುದೇ ಚುನಾವಣೆಗಳನ್ನು ನಡೆಸಿರುವುದಿಲ್ಲ ಮತ್ತು ಸಂಘದ ಲೆಕ್ಕ ಪರಿಶೀಲನೆ ಈವರೆಗೆ ಆಗಿರುವುದಿಲ್ಲ. ಈ ಕಾರಣಗಳಿಂದ ಸಂಘವು ವಾಸ್ತವಿಕವಾಗಿ ಅದರ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ವರದಿ ಮಾಡಿದ್ದಾರೆ.

ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಹಕಾರ ಸಂಘಗಳ ಉಪ ನಿಬಂಧಕರು, ತಹಶೀಲ್ದಾರ್, ಕಲಘಟಗಿ ತಾಲ್ಲೂಕು, ವಲಯ ಅರಣ್ಯಾಧಿಕಾರಿ, ಕಲಘಟಗಿ, ಕಂದಾಯ ನಿರೀಕ್ಷಕರು ಮತ್ತು ಗ್ರಾಮ ಲೆಕ್ಕಿಗರು ಇವರು ದಿನಾಂಕಃ 21–9–2002 ರಂದು ಸ್ಥಳಕ್ಕೆ ಭೇಟಿ ನೀಡಿ ವರದಿ ಸಲ್ಲಿಸಿದ್ದು ವಿವರಗಳು ಕೆಳಗಿನಂತಿವೆ.

1. ಸ್ಥಳಕ್ಕೆ ಭೇಟಿ ನೀಡಿದ ಸಮಯದಲ್ಲಿ 18 ಜನ ವ್ಯವಸಾಯಗಾರರು ಇದ್ದರು. ಅವರು ಬಹುತೇಕ ಪರಿಶಿಷ್ಟ ಜಾತಿಃಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದರು. ಹಾಗೂ ಅವರೆಲ್ಲರು 1974 ನೇ ಇಸವಿಯಲ್ಲಿ ಸಂಘದ ಕೋರಿಕೆಯ ಮೇರೆಗೆ ರೋಣ ತಾಲ್ಲೂಕಿನಿಂದ ವ್ಯವಸಾಯ ಮಾಡಲು ಬಂದಂತಹವರಾಗಿದ್ದಾರೆ.
2. ಈ ಜಮೀನನ್ನು ಚೆನ್ನಾಗಿ ಅಭಿವೃದ್ಧಿಪಡಿಸಿದ್ದು ಹತ್ತಿ, ಭತ್ತವನ್ನು ಬೆಳೆಯಲಾಗಿತ್ತು. ವ್ಯವಸಾಯ ಮಾಡುತ್ತಿರುವ ಭೂಮಿಯ ವಿಸ್ತೀರ್ಣ 53 ಎಕರೆ 5 ಗುಂಟೆ ಆಗಿರುತ್ತದೆ.
3. ಸದರಿ 18 ಜನರು ಸಂಘದ ಮೂಲ ಸದಸ್ಯರಾಗಿರುವುದಿಲ್ಲ. ಈ ಪೈಕಿ ಒಬ್ಬರಾದ ಶ್ರೀ ಸುರೇಶ್ ಚನ್ನಪ್ಪ ಕಣ್ಮಕ್ಕಲ್ ಎಂಬುವರು ಸಂಘದ ಮೂಲ ಸದಸ್ಯರೊಬ್ಬರಾದ ಶ್ರೀ ಚನ್ನಪ್ಪ ಕಣ್ಮಕ್ಕಲ್ ಎಂಬುವರ ಮಗನಾಗಿರುತ್ತಾರೆ. ಇವರು ಶ್ರೀ ಯಲ್ಲಪ್ಪ ಮೋರೆ ಎಂಬುವರಿಗೆ ಉಪ ಗುತ್ತಿಗೆ ನೀಡಿ ವ್ಯವಸಾಯ ಮಾಡಿಸುತ್ತಿದ್ದಾರೆ.
4. ಉಪ ನಿಬಂಧಕರು, ಸಹಕಾರ ಸಂಘಗಳ ಇಲಾಖೆ ಇವರು ದಿನಾಂಕಃ 5–10–2002 ರ ಪತ್ರದಲ್ಲಿ ವರದಿ ಮಾಡಿರುವ ಪ್ರಕಾರ ಸದರಿ ಸಂಘಕ್ಕೆ ಚುನಾವಣೆಗಳು ನಡೆಯದ ಕಾರಣ ಸಂಘವು ಕಾರ್ಯನಿರ್ವಹಿಸುತ್ತಿಲ್ಲ ಹಾಗೂ ಯಾವುದೇ ಕಾರ್ಯ ಚಟುವಟಿಕೆಗಳನ್ನು ಕೈಗೆತ್ತಿಕೊಳ್ಳುತ್ತಿಲ್ಲ ಹಾಗೂ ಸಂಘದ ಸದಸ್ಯರ ಬಗ್ಗೆ ಹಾಗೂ ಅವರ ವಾರಸುದಾರರ ಬಗ್ಗೆ ಮಾಹಿತಿ ಲಭ್ಯವಿರುವುದಿಲ್ಲ. ಈ ಕಾರಣಗಳಿಂದಾಗಿ ಸಂಘವನ್ನು ಸಮಾಪನಗೊಳಿಸುವ (Liquidate) ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲಾಗುವುದೆಂದು ಜಿಲ್ಲಾದಿಕಾರಿ, ಧಾರವಾಡ ಜಿಲ್ಲೆ ಇವರಿಗೆ ವರದಿ ಸಲ್ಲಿಸಿದ್ದಾರೆ.

ಮೇಲೆ (9) ರಲ್ಲಿ ಓದಲಾದ ದಿನಾಂಕಃ 19–11–2003 ರ ಪತ್ರದಲ್ಲಿ ಸದರಿ ಸಹಕಾರಿ ಸಂಘದ ಲೆಕ್ಕ ಪರಿಶೋಧನೆಯ 1970–71 ರಿಂದ ಬಾಕಿ ಉಳಿದಿರುತ್ತದೆ. ಸದರಿ ಸಹಕಾರಿ ಸಂಘಕ್ಕೆ 2 ನೇ ಬಾರಿ ಮಂಜೂರಾದ 90 ಎಕರೆ ಜಮೀನನ್ನು ಅರಣ್ಯ ಇಲಾಖೆಯು ಹಿಂದಕ್ಕೆ ಪಡೆದ ಆದೇಶದ ವಿರುದ್ಧ ಸದರಿ ಸಂಘವು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಿದವರ ವಿವರ ಹಾಗೂ ಇತರೆ ಸದಸ್ಯತ್ವದ ಬಗ್ಗೆ ಹಾಗೂ ಅವರ ವಾರಸುದಾರರ ಬಗ್ಗೆ ಯೂವುದೇ ಮಾಹಿತಿ ಲಭ್ಯವಿಲ್ಲ, ಹಾಲಿ ಸಂಘಕ್ಕೆ ಗುತ್ತಿಗೆ ನೀಡಿದ್ದ ಜಮೀನನ್ನು ಬೇಸಾಯ ಮಾಡುವವರು ಯಾರು ಎಂಬುದರ ಬಗ್ಗೆ ಮಾಹಿತಿ ಇಲ್ಲವೆಂದು ಸಹಕಾರ ಸಂಘಗಳ ನಿಬಂಧಕರು ವರದಿ ಮಾಡಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು ಹಾಗೂ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆಃಅಪಜೀ 59 ಎಫ್‌ಜಿಎಲ್ 99(ಭಾಗ–1), ಬೆಂಗಳೂರು, ದಿನಾಂಕಃ 24ನೇ ಏಪ್ರಿಲ್ 2004.**

ಧಾರವಾಡ ಜಿಲ್ಲೆ, ಕಲಘಟಗಿ ತಾಲ್ಲೂಕು, ಸಂಗಟಿಕೊಪ್ಪ ಗ್ರಾಮದ ಅರಣ್ಯ ಸರ್ವೆ ನಂ. 6 ರಲ್ಲಿ ಕಸ್ತೂರಿಬಾ ಸಹಕಾರ ಸಮುದಾಯ ಬೇಸಾಯ ಸಂಘ ನಿಯಮಿತ, ಸಂಗಟಿಕೊಪ್ಪ ಇವರಿಗೆ 90 ಎಕರೆ ಜಮೀನನ್ನು ಗುತ್ತಿಗೆ ನೀಡಿದ್ದ ದಿನಾಂಕಃ 20–11–1976 ರ ಸರ್ಕಾರಿ ಆದೇಶ ಸಂಖ್ಯೆ: ಎಎಫ್‌ಡಿ 100 ಎಫ್‌ಜಿಎಲ್ 76 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರು ಸದರಿ ಜಮೀನನ್ನು ಇಲಾಖೆಯ ವಶಕ್ಕೆ ಕೂಡಲೇ ಹಿಂತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಆರ್.ವತ್ಸಲ**

ಪಿ.ಆರ್.493

ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಬಂಡವಾಳ ಹಿಂತೆಗೆಯುವಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಕೃಷಿ ಕೈಗಾರಿಕಾ ನಿಗಮದ (ಕೆಎಐಸಿ) ಸ್ವಯಂ ನಿವೃತ್ತಿ ಯೋಜನೆ 2003 ಹಣ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಇಆರ್ 55:ಎಆರ್‌ಯು 2003 ದಿನಾಂಕ: 3.9.2003.
2. ರಾಜ್ಯ ಲೆಕ್ಕ ಪತ್ರ ಇಲಾಖೆ ಪತ್ರದ ಸಂಖ್ಯೆ: ರಾಲೆಪ: 21: ಲೇಪ:4 ಕೆಎಐಸಿ ದಿನಾಂಕ: 18.12.2003.
3. ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಇಆರ್: 55: ಎಆರ್‌ಯು 2003 ದಿನಾಂಕ: 26.12.2003
4. ಕೆಎಐಸಿ ವ್ಯವಸ್ಥಾಪಕ ನಿರ್ದೇಶಕರ ಆ.ಸ.ಪತ್ರ ಸಂಖ್ಯೆ: ಎಫ್‌ಎ:ಸ್ವ.ನಿ:2003 ದಿನಾಂಕ: 30.04.2004.

**ಪ್ರಸ್ತಾವನೆ:**

ಉಲ್ಲೇಖ 1ರಲ್ಲಿ ಪ್ರಸ್ತಾಪಿಸಿರುವ ಆದೇಶದನ್ವಯ ಕರ್ನಾಟಕ ಕೃಷಿ ಕೈಗಾರಿಕಾ ನಿಗಮವನ್ನು ಸಮಾಪನಗೊಳಿಸಿ ಸದರಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿರುವ 656 ನೌಕರರಿಗೆ ಸ್ವಯಂ ನಿವೃತ್ತಿ ನೀಡಲು ಮತ್ತು ಸ್ವಯಂ ನಿವೃತ್ತಿ ಯೋಜನೆಯನ್ನು ಆಯ್ಕೆ ಮಾಡಿಕೊಳ್ಳದೆ ನೌಕರರನ್ನು ಕಾನೂನಿಗೆ ಅನುಗುಣವಾಗಿ ಕೆಲಸದಿಂದ ವಜಾ ಮಾಡುವುದು ಎಂದು ಆದೇಶಿಸಿದೆ.

ರಾಜ್ಯ ಲೆಕ್ಕ ಪತ್ರ ಇಲಾಖೆಯು ಕರ್ನಾಟಕ ಕೃಷಿ ಕೈಗಾರಿಕಾ ನಿಗಮದ 609 ನೌಕರರ ಸ್ವಯಂ ನಿವೃತ್ತಿ ಲೆಕ್ಕವನ್ನು ಪೂರ್ವ ತನಿಖೆ ಮಾಡಿ ಉಲ್ಲೇಖ 2ರ ಪತ್ರದಲ್ಲಿ ವರದಿಯನ್ನು ಸಲ್ಲಿಸಿದೆ. ಈ ವರದಿಯ ಪ್ರಕಾರ 609 ನೌಕರರಿಗೆ ಪಾವತಿಸಲು (ಸ್ವಯಂ ನಿವೃತ್ತಿ ಅನುಗ್ರಹ ಧನ, ಉಪದಾನ ಮತ್ತು ರಜೆ ನಗದೀಕರಣ) 33.87 ಕೋಟಿ ರೂ.ಗಳು ಬೇಕಾಗುವುದು.

ಸರ್ಕಾರವು ಉಲ್ಲೇಖ 3ರಲ್ಲಿರುವ ಸರ್ಕಾರಿ ಆದೇಶದನ್ವಯ ರೂ. 10.00 ಕೋಟಿಗಳನ್ನು ಸ್ವಯಂ ನಿವೃತ್ತಿ ಯೋಜನೆಗಾಗಿ ಈಗಾಗಲೇ ಬಿಡುಗಡೆ ಮಾಡಲಾಗಿದೆ. ಈ ಮೊತ್ತವನ್ನು ಬಿಡುಗಡೆ ಮಾಡುವಾಗ ಆರ್ಥಿಕ ಇಲಾಖೆಯು ಉಳಿದ ಹಣ ಆಸ್ತಿ ವಿಲೇವಾರಿಯಿಂದ ಭರಿಸತಕ್ಕದ್ದು ಎಂದು ಷರತ್ತು ವಿಧಿಸಲಾಗಿತ್ತು.

ಕರ್ನಾಟಕ ಕೃಷಿ ಕೈಗಾರಿಕಾ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಉಲ್ಲೇಖ 4ರಲ್ಲಿ ನಮೂದಿಸಿರುವ ಪತ್ರದಲ್ಲಿ ಆಸ್ತಿ ಮಾರಾಟ ಮಾಡುವ ಪ್ರಕ್ರಿಯೆಯು ಅಧಿಕ ಕಾಲಾವಧಿ ತೆಗೆದುಕೊಳ್ಳುವ ಕಾರಣ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿಗೊಂಡಿರುವ ನೌಕರರಿಗೆ ಪಾವತಿಸಲು ಉಳಿದ ಹಣ ಮೇಲಿನ ಷರತ್ತನ್ನು ಸಡಿಲಗೊಳಿಸುವ ಮೂಲಕ ಯಾವುದೇ ಷರತ್ತುಗಳಿಲ್ಲದೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 802/ ವೆಚ್ಚ-1/2004 ದಿನಾಂಕ 05.05.2004ರಲ್ಲಿ ರೂ. 8,25,32,094/- ಗಳ ಬಿಡುಗಡೆಗಾಗಿ ಒಪ್ಪಿಗೆ ನೀಡಿದೆ. ಹಾಗಾಗಿ ಈ ಕೆಳಗಿನ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಇಆರ್ 55: ಎಆರ್‌ಯು: 2003, ಬೆಂಗಳೂರು, ದಿನಾಂಕ: 7ನೇ ಮೇ 2004**

ಮೇಲ್ಕಂಡ ಪ್ರಸ್ತಾವನೆ ಅನ್ವಯ ಕೆಎಐಸಿ ಲಿಮಿಟೆಡ್ ಬೆಂಗಳೂರು ಸಂಸ್ಥೆಯಲ್ಲಿ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಿದ ನೌಕರರಿಗೆ ವಿತರಿಸಲು ರೂ. 8,25,32,094/- (ರೂಪಾಯಿ ಎಂಟು ಕೋಟಿ ಇಪ್ಪತ್ತೈದು ಲಕ್ಷ ಮೂವತ್ತೆರಡು ಸಾವಿರ ತೊಂಬತ್ತ ನಾಲ್ಕು ಮಾತ್ರ) ಸಾಲದ ರೂಪದಲ್ಲಿ ಈ ಕೆಳಕಂಡ ಷರತ್ತುಗಳಿಗನ್ವಯ ಬಿಡುಗಡೆ ಮಾಡಲು ಆದೇಶಿಸಿದೆ.

1. ಬಿಡುಗಡೆ ಮಾಡಿದ ರೂ. 8,25,32,094/- ಗಳನ್ನು ಕಟ್ಟುನಿಟ್ಟಾಗಿ ಸ್ವಯಂ ನಿವೃತ್ತಿ ಪರಿಹಾರಗಳ ಪಾವತಿಗೆ ಮಾತ್ರ ಉಪಯೋಗಿಸತಕ್ಕದ್ದು ಹಾಗೂ ಈ ಹಣವನ್ನು ಬೇರೆ ಯಾವುದೇ ಉದ್ದೇಶಕ್ಕೂ ಉಪಯೋಗಿಸಬಾರದು.
2. ಮಂಜೂರಾಗಿರುವ ಮೊತ್ತವನ್ನು ಲೆಕ್ಕಪತ್ರ ಇಲಾಖೆಯ ಪೂರ್ವ ತನಿಖಾ ವಿವರಣಾ ಅನುಬಂಧದಂತೆ ವಿತರಣೆ ಮಾಡಬೇಕು.
3. ರಾಜ್ಯ ಲೆಕ್ಕ ಪತ್ರ ಇಲಾಖೆಯ ಘಟನಾಪೂರ್ವ ಲೆಕ್ಕ ತನಿಖೆಯ ವರದಿಯ ಪ್ರಕಾರವೇ ಖಚಿತವಾಗಿ ಹಣ ವಿತರಣೆ ಮಾಡುವ ಜವಾಬ್ದಾರಿ ಕರ್ನಾಟಕ ಕೃಷಿ ಕೈಗಾರಿಕಾ ನಿಗಮದ (ಕೆಎಐಸಿ) ವ್ಯವಸ್ಥಾಪಕ ನಿರ್ದೇಶಕರದ್ದಾಗಿರುತ್ತದೆ.
4. ಸದರಿ ಹಣವನ್ನು ಪ್ರತ್ಯೇಕ ಬ್ಯಾಂಕ್ ಖಾತೆಯಲ್ಲಿ ಜಮಾ ಮಾಡಿ ಆ ಖಾತೆಯ ಚೆಕ್‌ಗಳ ಮುಖಾಂತರ ಸ್ವಯಂ ನಿವೃತ್ತಿ ಹೊಂದಿದ ನೌಕರರಿಗೆ ವಿತರಿಸುವುದು.

ಈ ಹಣವನ್ನು ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಬೆಂಗಳೂರು ಇವರ ಮೇಲು ರುಜು ಪಡೆದು ರಾಜ್ಯ ಹುಜೂರು ಖಜಾನೆಯಿಂದ ಡ್ರಾ ಮಾಡುವುದು.

ಈ ಮೊತ್ತವನ್ನು 2004-05ನೇ ಸಾಲಿನ ಲೆಕ್ಕ ಶೀರ್ಷಿಕೆ 6852-02-190-4-02 (ಎನ್‌ಪಿ) ಯಿಂದ ಬಿಡುಗಡೆ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 802/ ವೆಚ್ಚ-1/2004 ದಿನಾಂಕ: 05.05.2004ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿ. ರಘುರಾಮ್**

ಪಿ.ಆರ್. 481 ಜಂಟಿ ನಿರ್ದೇಶಕರು, ಡಿಡಿಪಿಇಆರ್.

## ಆರ್ಥಿಕ ಸಚಿವಾಲಯ

## ಅಧಿಕೃತ ಜ್ಞಾಪನ

**ಸಂಖ್ಯೆ: ಆಇ 105: ಸಉಲಾ 2004 ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2004**

**ವಿಷಯ :** ದಿನಾಂಕ: 1.1.2004 ರಲ್ಲಿದ್ದಂತೆ ಸಣ್ಣ ಉಳಿತಾಯ ಇಲಾಖೆಯಲ್ಲಿನ ಸಹಾಯಕ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಚುರಪಡಿಸುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಆಇ 188 ಸಉಲಾ 2003 ದಿನಾಂಕ: 13.11.2003.

ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಸಹಾಯಕ ನಿರ್ದೇಶಕರುಗಳ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2004 ರಲ್ಲಿದ್ದಂತೆ ಈ ಕೆಳಕಂಡಂತೆ ಪ್ರಕಟಿಸಲಾಗಿದೆ:

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ:ಶ್ರೀಮತಿ | ಜನ್ಮ ದಿನಾಂಕ | ಸರ್ಕಾರದ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯ ದಿನಾಂಕ |
|---|---|---|---|---|
| 1. | ಎ. ಆರ್. ಸತ್ಯನಾರಾಯಣ | 04.09.1952 | 01.10.1981 | 17.09.1988 |
| 2. | ಜಿ.ಎಂ. ಶೆಡ್ಡೋಳಿ | 25.09.1952 | 25.11.1974 | 11.12.1988 |
| 3. | ಪಿ. ದೇವೇಂದ್ರಸ್ವಾಮಿ | 08.09.1951 | 05.11.1981 | 01.04.1990 |
| 4. | ಸಿ. ಕೃಷ್ಣಪ್ಪ | 09.06.1955 | 01.10.1981 | 01.04.1990 |
| 5. | ಮಹಮದ್ ಫಜಲುಲ್ಲಾ | 18.05.1949 | 05.12.1983 | 01.06.1992 |
| 6. | ಹೆಚ್. ರುದ್ರಪ್ಪ | 01.06.1954 | 27.03.1984 | 01.06.1992 |
| 7. | ಟಿ. ಪುಟ್ಟಸ್ವಾಮಿ | 01.05.1954 | 01.12.1983 | 28.05.1992 |
| 8. | ಮಹದೇವ ಮಡಿವಾಳ | 01.04.1953 | 11.07.1985 | 17.11.1992 |
| 9. | ಎನ್. ರಂಗಯ್ಯ | 29.09.1962 | 02.09.1985 | 11.07.1993 |
| 10. | ಶಂಕರ್ ಭೀ. ನಾಯಕವಾಡಿ | 20.05.1958 | 30.03.1984 | 04.08.1995 |
| 11. | ಶಿವಾನಂದ | 18.05.1955 | 03.04.1984 | 04.08.1995 |
| 12. | ಕೆ. ಸಿದ್ದಪ್ಪ | 07.10.1956 | 26.03.1984 | 04.12.1995 |
| 13. | ಎಂ. ಕೆ. ಹೆಗಡೆ | 14.06.1959 | 03.04.1984 | 04.12.1995 |
| 14. | ಎಂ. ಬಿ. ಸಿದ್ದರಾಜು | 08.05.1952 | 30.09.1985 | 20.12.1995 |
| 15. | ಎಸ್. ಆರ್. ದುಂಡಗಿ | 20.07.1961 | 30.03.1984 | 02.08.2001 |
| 16. | ಎಸ್. ಶ್ರೀನಿವಾಸಯ್ಯ | 10.04.1954 | 04.04.1984 | 02.08.2001 |
| 17. | ಕೆ. ಸುಲೋಚನ | 12.07.1957 | 29.03.1984 | 02.08.2001 |
| 18. | ಎಂ. ಎಸ್. ಪಾಟೀಲ್ | 20.07.1956 | 26.03.1984 | 02.08.2001 |
| 19. | ಬಿ. ಶಂಕರಗೊಲ್ಲ | 08.08.1949 | 26.03.1984 | 02.08.2001 |
| 20. | ಡಿ. ಅರುಣಕುಮಾರ್ | 20.01.1949 | 21.04.1969 | 02.08.2001 |
| 21. | ವಿ. ಕಲಾವತಿ | 22.10.1964 | 02.09.1985 | 02.08.2001 |
| 22. | ಎಂ. ಎ. ಮೂಡಲಗಿ | 01.06.1960 | 04.09.1985 | 02.08.2001 |
| 23. | ಕೆ. ಆರ್. ನಾಗೇಂದ್ರರಾವ್ | 28.04.1960 | 09.09.1985 | 02.08.2001 |
| 24. | ಚಂದ್ರೇಗೌಡ | 18.07.1961 | 04.09.1985 | 02.08.2001 |
| 25. | ಸಿ. ಪುಟ್ಟರಾಜು | 25.06.1960 | 25.09.1985 | 02.08.2001 |
| 26. | ಬಿ. ಜಯಪ್ಪ | 03.06.1962 | 24.11.1988 | 02.08.2001 |
| 27. | ಬಿ. ಜಿ. ಮಲ್ಲೇದೇವರು | 08.06.1954 | 05.09.1985 | 13.09.2001 |
| 28. | ಜರೀನಾ ಎಂ. ಶೇಖ್ | 28.05.1954 | 06.09.1985 | 13.09.2001 |
| 29. | ನಾಡಗಿರಿ ಶಂಕರ್ ಆರ್. | 19.07.1961 | 25.11.1988 | 13.09.2001. |

ಈ ಜೇಷ್ಠತಾ ಪಟ್ಟಿಯ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಅಂತಹ ಅಧಿಕಾರಿಗಳು ಈ ಅಧಿಕೃತ ಜ್ಞಾಪನ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳನ್ನು ಇಲಾಖಾ ನಿರ್ದೇಶಕರ ಮುಖಾಂತರ ಸರ್ಕಾರಕ್ಕೆ ಕಳುಹಿಸಿ ಕೊಡತಕ್ಕದ್ದು. ಈ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಬಾರದಿದ್ದಲ್ಲಿ ಈ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿ ಪ್ರಕಟಿಸಲು ಕ್ರಮ ತೆಗೆದುಕೊಳ್ಳಲಾಗುವುದು.

**ಎನ್. ಪ್ರಭಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 502 ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

**ಬಂಡವಾಳ ಹಿಂತೆಗೆಯುವಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಸಚಿವಾಲಯ**

**ವಿಷಯ :** ಕರ್ನಾಟಕ ವಿದ್ಯುತ್ ಕಾರ್ಖಾನೆ ನಿಯಮಿತದ ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಇಆರ್ 52 ಎಆರ್‌ಯು 2002 ಬೆಂಗಳೂರು ದಿನಾಂಕ: 10.01.2003.

2. ವ್ಯವಸ್ಥಾಪಕ ನಿರ್ದೇಶಕರು, ಕವಿಕಾ, ಇವರ ಪತ್ರ ಸಂಖ್ಯೆ: ಕವಿಕಾ/ ಪಿಎ: 2003-2004/3087 ದಿನಾಂಕ: 20.12.2003.

3. ರಾಜ್ಯ ಲೆಕ್ಕಪತ್ರ ಇಲಾಖೆ, ಪತ್ರ ಸಂಖ್ಯೆ: ರಾಲೆಪ: ಎ4:ತನಿಖೆ: ಕವಿಕಾ: 33:2003-04:5716 ದಿನಾಂಕ: 16.02.2004.
4. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 365: ಇಎಕ್ಸ್‌ಪಿ.1/2004, ದಿನಾಂಕ: 21.04.2004.

**ಪ್ರಸ್ತಾವನೆ:**

ಕರ್ನಾಟಕ ವಿದ್ಯುತ್ ಕಾರ್ಖಾನೆ ನಿಯಮಿತವನ್ನು ಖಾಸಗಿಕರಣಗೊಳಿಸುವ ಕುರಿತು ಮತ್ತು ಅಲ್ಲಿನ ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಗಳನ್ನು ನೀಡಲು ಸರ್ಕಾರವು ಮೇಲಿನ ಉಲ್ಲೇಖ (1)ರಲ್ಲಿ ಆದೇಶ ಹೊರಡಿಸಿತು.

ಆರ್ಥಿಕ ಇಲಾಖೆ ಉಲ್ಲೇಖ (4)ರಲ್ಲಿ ತನ್ನ ಟಿಪ್ಪಣಿಯಲ್ಲಿ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಗಳನ್ನು ಬಿಡುಗಡೆ ಮಾಡಲು ಸಹಮತ ನೀಡಿರುತ್ತಾರೆ. ವ್ಯವಸ್ಥಾಪಕ ನಿರ್ದೇಶಕರು, ಕವಿಕಾರವರು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ಲೆಕ್ಕ ಪೂರ್ವ ತನಿಖೆಯಾದ ವಿವರವನ್ನು ಉಲ್ಲೇಖಿಸಿ ಒಟ್ಟು 13 ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯನ್ನು ವಿಸ್ತರಿಸಲು ಸಾಧ್ಯವಾಗುವಂತೆ ರೂ.71.72 ಲಕ್ಷಗಳನ್ನು ಬಿಡುಗಡೆ ಮಾಡಲು ಉಲ್ಲೇಖ (2)ರಲ್ಲಿ ಕೋರಿದ್ದರು. ಆರ್ಥಿಕ ಇಲಾಖೆಯು ಸಂಖ್ಯೆ: ಡಿಡಿಪಿಇಆರ್: 52 ಎಆರ್‌ಯು 2002 ಕಡತದಲ್ಲಿ ಉಲ್ಲೇಖ ಸಂಖ್ಯೆ: ಎಫ್‌ಡಿ 365 ಇಎಕ್ಸ್‌ಪಿ-1 2004 ದಿನಾಂಕ: 21.04.2004 ರಂದು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ಪೂರ್ವ ತನಿಖೆ ವಿವರಗಳನ್ನು ಪರಿಶೀಲಿಸಿದ ನಂತರ ಕವಿಕಾ ಘಟಕದ ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಗಳಿಗಾಗಿ ರೂ. 71.72 ಲಕ್ಷಗಳನ್ನು ಸಾಲವಾಗಿ ಬಿಡುಗಡೆ ಮಾಡಲು ಸಹಮತಿಸಿದ್ದಾರೆ.

ಹಾಗಾಗಿ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಇಆರ್ 52 ಎಆರ್‌ಯು 2002, ಬೆಂಗಳೂರು ದಿನಾಂಕ: 4ನೇ ಮೇ 2004**

ಕರ್ನಾಟಕ ವಿದ್ಯುತ್ ಕಾರ್ಖಾನೆ ನಿಯಮಿತದ ಸ್ವಯಂ ನಿವೃತ್ತಿ ಯೋಜನೆ ಪಡೆದ 13 ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಪರಿಹಾರಗಳನ್ನು ವಿತರಿಸಲು ಸಾಧ್ಯವಾಗುವಂತೆ ರೂ. 71.72 ಲಕ್ಷಗಳನ್ನು (ರೂಪಾಯಿ ಎಪ್ಪತ್ತೊಂದು ಲಕ್ಷ ಎಪ್ಪತ್ತೆರಡು ಸಾವಿರ ಮಾತ್ರ) ಸಾಲವಾಗಿ ಬಿಡುಗಡೆ ಮಾಡಲು ಆದೇಶಿಸಿದೆ. ಈ ಮೊತ್ತವನ್ನು 2004-05ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 6852-02-190-4-02 (NP) "ಸ್ಟೇಟ್ ರಿನೀವಲ್ ಫಂಡ್" (VRS and other reliefs) ನಿಂದ ಬಿಡುಗಡೆ ಮಾಡಲಾಗಿದೆ.

ಮೇಲಿನ ಹಣವನ್ನು ಕವಿಕಾ ಘಟಕದ 13 ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಗಳನ್ನು ವಿತರಿಸುವ ಸಲುವಾಗಿಯೇ ಉಪಯೋಗಿಸತಕ್ಕದ್ದು. ರಾಜ್ಯ ಲೆಕ್ಕಪತ್ರ ಇಲಾಖೆಯವರು ಪೂರ್ವಲೆಕ್ಕ ತನಿಖೆ ಮಾಡಿದ ರೀತ್ಯಾ ಸಂಬಂಧಿಸಿದ ನೌಕರರಿಗೆ ಅಕೌಂಟ್ ಪೇಯಿ ಚೆಕ್ ಮುಖಾಂತರ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಗಳನ್ನು ವಿತರಿಸುವುದು. ಈ ಹಣವನ್ನು ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ, ಇವರ ಮೇಲುರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ಡ್ರಾ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 365 ಇಎಕ್ಸ್‌ಪಿ-1 2004 ಆರ್ಥಿಕ ಇಲಾಖೆ (ಇಎಕ್ಸ್‌ಪಿ-1) ದಿನಾಂಕ: 21.04.2004ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿ. ರಘುರಾಮ್**

ಪಿ.ಆರ್. 503

ಜಂಟಿ ನಿರ್ದೇಶಕರು (ಪಿಇಆರ್) ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ(ಪ್ರ), ಡಿಡಿಪಿಇಆರ್.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** 2004-2005ನೇ ಸಾಲಿಗೆ ರಾಜ್ಯದ ಖಾಸಗಿ ಆಯುರ್ವೇದ ಕಾಲೇಜುಗಳಲ್ಲಿ ಸ್ನಾತಕೋತ್ತರ ಪ್ರವೇಶ ನೀತಿಯಲ್ಲಿ ಆಡಳಿತ ಮಂಡಳಿಯ ಸೀಟುಗಳನ್ನು ಕಳೆದ ಸಾಲಿನಂತೆ ಯಥಾಸ್ಥಿತಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯು: 88: ಎಂಪಿಎಸ್: 2004, ದಿನಾಂಕ: 1.4.2004.
2. ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಭಾವೈಪ: 67: ನಿಆವಿ: 2004-2005, ದಿನಾಂಕ: 8.4.2004 ಮತ್ತು ದಿನಾಂಕ: 15.4.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಕೆಲವು ಖಾಸಗಿ ಆಯುರ್ವೇದ ಕಾಲೇಜುಗಳಲ್ಲಿನ ಸ್ನಾತಕೋತ್ತರ ಪದವಿ ಸೀಟುಗಳನ್ನು 50:50ರ ಅನುಪಾತದಲ್ಲಿ ಸರ್ಕಾರ ಮತ್ತು ಆಡಳಿತ ಮಂಡಳಿಯ ಸೀಟುಗಳನ್ನಾಗಿ ಹಂಚಿಕೆ ಮಾಡಿ 2004-2005ನೇ ಸಾಲಿನಿಂದ ಮುಂದುವರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ (2)ರ ಪತ್ರದಲ್ಲಿ ಅನುದಾನಿತ ಮತ್ತು ಅನುದಾನ ರಹಿತ ಕಾಲೇಜುಗಳಿಗೆ ಒಂದೊಂದು ವಿಷಯಕ್ಕೆ 2 ರಿಂದ 5 ಸೀಟುಗಳ ಸ್ನಾತಕೋತ್ತರ ಪದವಿ ಸೀಟುಗಳು ಇರುತ್ತವೆ. ಸೆಂಟ್ರಲ್ ಕೌನ್ಸಿಲ್ ಆಫ್ ಇಂಡಿಯನ್ ಮೆಡಿಸಿನ್ ನವದೆಹಲಿಯಿಂದ ನವದೆಹಲಿ 16 ವಿಷಯಗಳು ಸ್ನಾತಕೋತ್ತರ ಪದವಿಗೆ ಅನುಮೋದಿತವಾಗಿರುತ್ತವೆ. ಸರ್ಕಾರಿ ಕಾಲೇಜು ಮತ್ತು ಅನುದಾನಿತ ಮತ್ತು ಅನುದಾನ ರಹಿತ ಕಾಲೇಜುಗಳಲ್ಲಿ ಈಗ ಕೇವಲ 5-6 ವಿಷಯಗಳಲ್ಲಿ ಮಾತ್ರ ಸ್ನಾತಕೋತ್ತರ ಕೋರ್ಸುಗಳು ನಡೆಯುತ್ತವೆ ಹಾಗೂ ಈಗಾಗಲೇ ಅನುದಾನಿತ: ಅನುದಾನ ರಹಿತ ಕಾಲೇಜುಗಳು ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ

ವಿಶ್ವವಿದ್ಯಾಲಯದ ಪ್ರವೇಶ ವೇಳಾಪಟ್ಟಿಯ ಪ್ರಕಾರ ಹಿಂದಿನ ವರ್ಷಗಳಲ್ಲಿ ಅನುಸರಿಸಿದ ರೀತಿಯಲ್ಲಿ ಪ್ರವೇಶ ಪ್ರಕ್ರಿಯೆಯನ್ನು ಪೂರ್ತಿಗೊಳಿಸಿರುತ್ತಾರೆಂದು ತಿಳಿಸಿರುತ್ತಾರೆ.

ನಿರ್ದೇಶಕರು ತಮ್ಮ ಪತ್ರದಲ್ಲಿ ಮುಂದುವರೆಸುತ್ತಾ, ದಿನಾಂಕ: 1.4.2004 ರಂದು ಹೊರಡಿಸಿರುವ ಆದೇಶದ ಮೊದಲು ಸರ್ಕಾರ ಯಾವುದೇ ಅನುದಾನಿತ: ಅನುದಾನ ರಹಿತ ಖಾಸಗಿ ಆಯುರ್ವೇದ ಹೋಮಿಯೋಪತಿ ಕಾಲೇಜುಗಳನ್ನು ಸ್ನಾತಕೋತ್ತರ ಕೋರ್ಸುಗಳ ಸೀಟುಗಳನ್ನು ಸರ್ಕಾರವು ಪಡೆಯುತ್ತಿರಲಿಲ್ಲವೆಂದು ತಿಳಿಸಿದ್ದಾರೆ ಹಾಗೂ ಸ್ನಾತಕೋತ್ತರ ಪದವಿ ಕೋರ್ಸುಗಳನ್ನು ಇತ್ತೀಚೆಗಿನ ವರ್ಷಗಳಲ್ಲಿ ಪ್ರಾರಂಭಿಸಿರುವ ಈ ಕಾಲೇಜುಗಳಲ್ಲಿ ಇನ್ನೂ ಪ್ರಾರಂಭದ ಹಂತದಲ್ಲಿರುವುದರಿಂದ 2004-2005ನೇ ಸಾಲಿಗೆ ರಾಜ್ಯದ ಖಾಸಗಿ ಆಯುರ್ವೇದ: ಹೋಮಿಯೋಪತಿ ಕಾಲೇಜುಗಳಲ್ಲಿ ಸ್ನಾತಕೋತ್ತರ ಪ್ರವೇಶ ನೀತಿಯಲ್ಲಿ ಎಲ್ಲಾ ಸೀಟುಗಳನ್ನು ಕಳೆದ ಸಾಲಿನಂತೆ ಆಡಳಿತ ಮಂಡಳಿಯೇ ಪ್ರತಿಯೊಂದು ಮಹಾವಿದ್ಯಾಲಯದಲ್ಲಿ ಮೆರಿಟ್ ಆಧಾರದ ಮೇಲೆ ಭರ್ತಿ ಮಾಡಲು ಆದೇಶಿಸಿದಂತೆ, ಪ್ರಸ್ತುತ ಸಾಲಿನಲ್ಲಿ ಯಥಾಸ್ಥಿತಿ ಮುಂದುವರೆಸಲು ಸರ್ಕಾರದ ಮಂಜೂರಾತಿಯನ್ನು ಕೋರಿದ್ದಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 320 ಪಿಟಿಡಿ 2004, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ, ರಾಜ್ಯದ ಖಾಸಗಿ ಆಯುರ್ವೇದ: ಹೋಮಿಯೋಪತಿ ಕಾಲೇಜುಗಳಲ್ಲಿ ಸ್ನಾತಕೋತ್ತರ ಪ್ರವೇಶ ನೀತಿಗೆ ಸಂಬಂಧಪಟ್ಟಂತೆ, ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ: 88: ಎಂಪಿಎಸ್: 2004, ದಿನಾಂಕ: 1.4.2004ನ್ನು ಭಾಗಶಃ ಮಾರ್ಪಡಿಸಿ, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯದ ವ್ಯಾಪ್ತಿಯಲ್ಲಿನ ಸ್ನಾತಕೋತ್ತರ ಪ್ರವೇಶವನ್ನು 2004-2005ನೇ ಸಾಲಿಗೆ ಮಾತ್ರ ಕಳೆದ ಸಾಲಿನಂತೆ ಯಥಾಸ್ಥಿತಿ ಮುಂದುವರೆಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚೋಮಾನಾಯಕ್ ಜಿ.**

ಪಿ.ಆರ್. 504

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಆರ್ಥಿಕ ಸಚಿವಾಲಯ**

**ವಿಷಯ :** ನಿವೃತ್ತಿ ಸಮಯದಲ್ಲಿ ನಿವೃತ್ತಿ ವೇತನದ ಪರಿವರ್ತನೆ ಬಗ್ಗೆ ಸೂಚನೆಗಳು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ದಿನಾಂಕ: 30.9.2003.

2. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ದಿನಾಂಕ: 17.12.2003.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಪಿಂಚಣಿ ನಿಯಮಗಳ ಪರಿಷ್ಕರಣೆಗೆ ಸಂಬಂಧಿಸಿದಂತೆ ಕೆಲವು ಸೂಚನೆಗಳನ್ನು ನೀಡಿದ್ದು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 376 ಮತ್ತು 377ನೇ ನಿಯಮಗಳ ಪ್ರಕಾರ ನಿವೃತ್ತಿ ವೇತನವನ್ನು ಮಂಜೂರು ಮಾಡಲು ಸಕ್ಷಮವಾದ ಅಧಿಕಾರಿಯು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ಮೇರೆಗೆ ಸರ್ಕಾರಿ ನೌಕರನಿಗೆ ಮಂಜೂರು ಮಾಡಲಾದ ಅಥವಾ ಮಂಜೂರು ಮಾಡಬಹುದಾದ ಯಾವುದೇ ನಿವೃತ್ತಿ ವೇತನದ 1/3 ಅಂಶಕ್ಕಿಂತ ಹೆಚ್ಚಾಗದಷ್ಟು ಭಾಗವನ್ನು ಸರ್ಕಾರಿ ನೌಕರನು ಪರಿವರ್ತನೆ ಮಾಡಲು ಕಲ್ಪಿಸಿರುವ ಅವಕಾಶದ ಬದಲಿಗೆ ನಿವೃತ್ತಿ ವೇತನದ 1/5 ಭಾಗವನ್ನು ಪರಿವರ್ತನೆ ಮಾಡಲು ಸೂಚನೆಗಳನ್ನು ನೀಡಲಾಗಿತ್ತು. ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 377 ರಲ್ಲಿರುವ ನಿವೃತ್ತಿ ವೇತನದ ಧ್ವನಿತ ಸೋಡಿ ದರವನ್ನು (Implicit discount rate) ಶೇಕಡ 4 ರಿಂದ ಶೇಕಡ 8ಕ್ಕೆ ಹೆಚ್ಚಿಸಿ ಅದಕ್ಕನುಗುಣವಾಗಿ ದಿನಾಂಕ: 17.12.2003 ರಲ್ಲಿ ಪರಿವರ್ತನಾ ಕೋಷ್ಟಕವನ್ನು ಹೊರಡಿಸಲಾಗಿತ್ತು. ಸರ್ಕಾರವು ಈ ಸೌಲಭ್ಯಕ್ಕೆ ಸಂಬಂಧಿಸಿದಂತೆ ದಿನಾಂಕ: 30.09.2003 ರ ಮೇಲೆ (1) ರಲ್ಲಿ ಓದಲಾದ ಆದೇಶವನ್ನು ಹೊರಡಿಸುವ ಮೊದಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 376 ರಲ್ಲಿ ಇದ್ದ ಸೌಲಭ್ಯಗಳನ್ನೇ ದಿನಾಂಕ 1.9.2003 ರಿಂದಲೂ ಮುಂದುವರೆಸಲು ನಿರ್ಣಯಿಸಿದ್ದು, ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003 ಬೆಂಗಳೂರು, ದಿನಾಂಕ: 4ನೇ ಮೇ 2004**

ಪ್ರಸ್ತಾವನೆಯಲ್ಲಿ ತಿಳಿಸಿದ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ: 30.9.2003ರ ಎಫ್‌ಡಿ 6 ಸನಿತಿ 2003, ಕ್ರಮಾಂಕ ಆದೇಶವನ್ನು ಭಾಗಶಃ ಮಾರ್ಪಡಿಸಿ, ದಿನಾಂಕ: 1.9.2003 ರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 376 ರಲ್ಲಿರುವ ಅವಕಾಶಗಳನ್ನೇ ಅಂದರೆ ಸರ್ಕಾರಿ ನೌಕರರ ನಿವೃತ್ತಿ ಸಮಯದಲ್ಲಿ ನಿವೃತ್ತಿ ವೇತನದ 1/3 ಭಾಗವನ್ನು ಪರಿವರ್ತನೆ ಮಾಡುವ ಅವಕಾಶಗಳನ್ನೇ ಮುಂದುವರೆಸಲು ಆದೇಶಿಸಿದೆ. ಹಾಗೂ ದಿನಾಂಕ: 17.12.2003ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003 ರಲ್ಲಿ ಪರಿವರ್ತಿತ ವಿಶ್ರಾಂತಿ ವೇತನಕ್ಕೆ ಸಂಬಂಧಿಸಿದಂತೆ ಹೊರಡಿಸಲಾಗಿರುವ ಪರಿವರ್ತನಾ ಕೋಷ್ಟಕಕ್ಕೆ ಯಾವುದೇ ಮಾರ್ಪಾಡು ಇರುವುದಿಲ್ಲ. ಆದುದರಿಂದ ದಿನಾಂಕ: 1.9.2003 ರಿಂದ ಜಾರಿಗೆ ಬರುವಂತೆ ನಿವೃತ್ತರಾದ ನೌಕರರ ಪ್ರಕರಣದಲ್ಲಿ ಮೇಲೆ ಓದಲಾದ ದಿನಾಂಕ: 17.12.2003 ರ ಆದೇಶಕ್ಕೆ ಅನುಬಂಧಿಸಿರುವ ಪರಿವರ್ತನಾ ಕೋಷ್ಟಕದನ್ವಯ ಪರಿವರ್ತನಾ ಮೌಲ್ಯವನ್ನು ಲೆಕ್ಕಮಾಡಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎನ್. ಈರೇಗೌಡ**

ಪಿ.ಆರ್. 505

ಸರ್ಕಾರದ ಉಪಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು-1).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

ವಿಷಯ: ಬೆಂಗಳೂರು ವೈದ್ಯಕೀಯ ಕಾಲೇಜಿನ ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕ ಡಾ:ಟಿ.ಡಿ.ಪ್ರಕಾಶ್‌ರವರ ವಿರುದ್ಧ ಇಲಾಖಾ ವಿಚಾರಣೆ.

ಓದಲಾಗಿದೆ:
೧) ತಾ: ೦೭.೦೬.೨೦೦೨ ಸಂಖ್ಯೆ: ವಶ್ರೇಅ (೩) ೪೮: ೨೦೦೧-೦೨ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
೨) ತಾ: ೨೭.೦೬.೨೦೦೨ ಸಂಖ್ಯೆ: ಆಕುಕ ೧೫೧ ಎಂಎಂಸಿ ೨೦೦೨ರ ಅಧಿಸೂಚನೆ
೩) ತಾ: ೩೦.೧೧.೨೦೦೨ ಸಂಖ್ಯೆ: ಎಸ್‌ಆರ್‌ಒ(೩) ೪೮:೨೦೦೧-೦೨ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
೪) ತಾ: ೨೧.೦೩.೨೦೦೩ ಸಂಖ್ಯೆ: ಎಸ್‌ಆರ್‌ಒ (೨) ೨೨೫:೨೦೦೨-೦೩ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
೫) ತಾ: ೧೬.೦೪.೨೦೦೩ ಸಂಖ್ಯೆ: ಎಸ್‌ಆರ್‌ಒ(೩) ೪೮:೨೦೦೧-೦೨ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
೬) ತಾ: ೦೩.೧೨.೨೦೦೩ ಸಂಖ್ಯೆ: ಆಕುಕ ೧೫೧ ಎಂಎಂಸಿ ೨೦೦೨ರ ನೋಟೀಸ್
೭) ತಾ: ೦೫.೦೧.೨೦೦೪ರ ಮೈಸೂರು ವೈದ್ಯಕೀಯ ಕಾಲೇಜಿನ ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕ ಡಾ:ಟಿ.ಡಿ. ಪ್ರಕಾಶ್‌ರವರ ಲಿಖಿತ ರಕ್ಷಣಾ ಹೇಳಿಕೆ
೮) ತಾ: ೦೧.೦೪.೨೦೦೪ ಸಂಖ್ಯೆ: ಜಿಇ III ಎಂ ೫: ೨೦೦೩-೦೪:೮೬೭೦ರ ಮಹಾಲೇಖಪಾಲರು (ಎ ಅಂಡ್ ಇ)ರವರ ಪತ್ರ

ಪೀಠಿಕೆ:

೧. ಮೈಸೂರು ವೈದ್ಯಕೀಯ ಕಾಲೇಜಿನ ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕ ಡಾ:ಟಿ.ಡಿ.ಪ್ರಕಾಶ್‌ರವರು ತಾ: ೧೩.೦೯.೨೦೦೧ ರಿಂದ ೨೧.೧೧.೨೦೦೧ರವರೆಗೆ ೭೦ದಿನಗಳ ಸಂಯುಕ್ತ ರಜೆ ಮಂಜೂರಾತಿಗೆ ವೈದ್ಯಕೀಯ ಆಧಾರದ ಮೇಲೆ ಅರ್ಜಿ ಸಲ್ಲಿಸಿದ್ದರು. ತಾ: ೩೧.೧೦.೨೦೦೧ರಂದು ೪೯ ದಿನಗಳ ರಜೆಯನ್ನು ಬಳಸಿಕೊಂಡು ಕರ್ತವ್ಯಕ್ಕೆ ಹಾಜರಾಗಿದ್ದರು. ಮತ್ತೆ ತಾ: ೦೭.೧೧.೨೦೦೧ರಿಂದ ೦೪.೦೨.೨೦೦೨ರವರೆಗೆ ವೈದ್ಯಕೀಯ ಆಧಾರದ ಮೇಲೆ ರಜೆ ಮಂಜೂರಾತಿಗಾಗಿ ಅರ್ಜಿ ಸಲ್ಲಿಸಿದ್ದರು. ಆದರೆ ರಜೆ ಮಂಜೂರಾತಿಗಾಗಿ ಸಲ್ಲಿಸಿದ್ದ ರಜೆ ಅರ್ಜಿಯಲ್ಲಿ ನಿರ್ದಿಷ್ಟ ಪಡಿಸಿದ್ದ ಅವಧಿಗೂ ವೈದ್ಯಕೀಯ ಪ್ರಮಾಣಪತ್ರದಲ್ಲಿ ಸೂಚಿಸಿದ್ದ ಅವಧಿಗೂ ಸಮನ್ವಯವಿಲ್ಲದೆ ವ್ಯತಿರಿಕ್ತವಾಗಿತ್ತು, ಆದಕಾರಣ ರಜೆ ಮಂಜೂರು ಮಾಡಲು ಸಾಧ್ಯವಾಗಿರಲಿಲ್ಲ. ತಾ: ೦೪.೦೨.೨೦೦೨ರಂದು ರಜೆ ಮುಕ್ತಾಯಗೊಂಡ ನಂತರ ತಾ: ೦೫.೦೨.೨೦೦೨ರಂದು ಕರ್ತವ್ಯದ ಮೇಲೆ ಹಾಜರಾಗಬೇಕಾಗಿತ್ತು, ಆದರೆ ಕರ್ತವ್ಯಕ್ಕೆ ಹಾಜರಾಗಿರಲಿಲ್ಲ. ತಾ: ೦೫.೦೨.೨೦೦೨ರಿಂದ ತಾ: ೩೦.೦೪.೨೦೦೨ರವರೆಗೆ ರಜೆ ವಿಸ್ತರಣಾ ಅರ್ಜಿಯನ್ನು ತಾ: ೦೪.೦೨.೨೦೦೨ರಂದು ವಿಭಾಗೀಯ ಮುಖ್ಯಸ್ಥರಿಗೆ ಸಲ್ಲಿಸಿ ವೈದ್ಯಕೀಯ ಆಧಾರದ ಮೇಲೆ ಎಂದು ರಜೆ ಅರ್ಜಿಯಲ್ಲಿ ನಮೂದಿಸಿದ್ದರೂ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸಿರಲಿಲ್ಲ. ಆದಕಾರಣ ರಜೆ ಮಂಜೂರಾಗಿರಲಿಲ್ಲ. ತಾ: ೦೧.೦೫.೨೦೦೨ರಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು,

ಆದರೆ ಕರ್ತವ್ಯಕ್ಕೂ ಹಾಜರಾಗಲಿಲ್ಲ ಅಥವಾ ರಜೆ ವಿಸ್ತರಣೆಗೆ ಅರ್ಜಿ ಸಲ್ಲಿಸಿರಲಿಲ್ಲ. ಅಂತಿಮವಾಗಿ ಇದ್ದಕ್ಕಿದ್ದಂತೆ ಅನಧಿಕೃತ ಗೈರುಹಾಜರಿಯಿಂದ ಹಿಂತಿರುಗಿ ಕರ್ತವ್ಯಕ್ಕೆ ಹಿಂತೆಗೆದುಕೊಂಡು ಸ್ಥಳ ನಿಯುಕ್ತಿಗೆ ತಾ: ೧೮.೦೫.೨೦೦೨ರಂದು ಅರ್ಜಿ ಸಲ್ಲಿಸಿದ್ದರು. ತಾ: ೨೭.೦೬.೨೦೦೨ ಸಂಖ್ಯೆ: ಆಕುಕ ೧೫೧ ಎಂಎಂಸಿ ೨೦೦೧ರ ಅಧಿಸೂಚನೆಯಲ್ಲಿ ಅವರ ವಿರುದ್ಧ ಶಿಸ್ತುಕ್ರಮ ತೆಗೆದುಕೊಳ್ಳುವುದನ್ನು ಬಾಕಿಇಟ್ಟು ಕರ್ತವ್ಯದ ಮೇಲೆ ತೆಗೆದುಕೊಂಡು ಮೈಸೂರು ವೈದ್ಯಕೀಯ ಕಾಲೇಜಿನ ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ನೇಮಿಸಲಾಗಿತ್ತು . ೨೮ದಿನಗಳ ನಂತರ ಅಂದರೆ ತಾ: ೨೪.೦೭.೨೦೦೨ರಂದು ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಪದಗ್ರಹಿಸಿದ್ದರು. ತಾ: ೧೩.೦೯.೨೦೦೧ರಿಂದ ೨೩.೦೭.೨೦೦೨ರವರೆಗಿನ ಅವಧಿಗೆ ಅನಧಿಕೃತ ಗೈರುಹಾಜರಾಗಿದ್ದರು.

೨. ಕೆಸಿಎಸ್‌ಆರ್‌ಸ್ ನ ೧೦೮ನೇ ನಿಯಮದೊಂದಿಗೆ ಓದಲಾದ ತಾ: ೦೪.೦೯.೨೦೦೧ ಸಂಖ್ಯೆ: ಸಿಆಸುಇ ೧೮ ಸೇಇವಿ ೨೦೦೧ರ ಸುತ್ತೋಲೆ ಪ್ರಕಾರ ಯಾವುದೇ ಸರ್ಕಾರಿ ನೌಕರರು ೪ತಿಂಗಳ ಅವಧಿಗೆ ಮೀರಿ ಕರ್ತವ್ಯದಿಂದ ಗೈರುಹಾಜರಾದಲ್ಲಿ ಅವರನ್ನು ೧೯೫೭ರ ಕೆಸಿಎಸ್(ಸಿಸಿಎ) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಪ್ರಕ್ರಿಯೆಯನ್ನು ಪಾಲಿಸಿ ಅವರನ್ನು ಸೇವೆಯಿಂದ ವಜಾ ಮಾಡುವ ಅಥವಾ ತೆಗೆದುಹಾಕುವ ದಂಡನೆಯನ್ನು ವಿಧಿಸಬಹುದಾಗಿರುತ್ತದೆ. ಆದಕಾರಣ ೧೯೫೭ರ ಕೆಸಿಎಸ್(ಸಿಸಿಎ) ನಿಯಮಾವಳಿಯ ೧೧ನೇ ನಿಯಮದಡಿ ದೋಷಾರೋಪಣಾ ಪಟ್ಟಿ, ಪ್ರತಿಯೊಂದು ದೋಷಾರೋಪಣೆಯ ದುರ್ನಡತೆ ಅಥವಾ ದುರ್ವರ್ತನೆಯ ಹೇಳಿಕೆ, ಸಾಕ್ಷಿದಾರರ ಹಾಗೂ ದಸ್ತಾವೇಜುಗಳ ಪಟ್ಟಿಗಳನ್ನೊಳಗೊಂಡ ತಾ: ೦೩.೧೨.೨೦೦೩ರ ನೋಟೀಸ್‌ನ್ನು ಆಪಾದಿತರ ಮೇಲೆ ಜಾರಿ ಮಾಡಲಾಗಿತ್ತು, ೧೫ದಿನಗಳ ಅವಧಿಯಲ್ಲಿ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು . ಅವರು ಸದರಿ ನಿಯಮಾವಳಿಯ ೧೧(೪)ನೇ ನಿಯಮದಡಿ ಸಲ್ಲಿಸಿರುವ ಲಿಖಿತ ರಕ್ಷಣಾ ಹೇಳಿಕೆಯ ಸಾರಾಂಶ ಈ ಮುಂದಿನಂತಿದೆ.

೩. ಅವರ ಕೌಟುಂಬಿಕ ಸಮಸ್ಯೆಗಳ ಪ್ರಯುಕ್ತ ದಿ: ೧೫.೦೬.೨೦೦೧ರಿಂದ ೧೨.೦೯.೨೦೦೧ರವರೆಗೆ ೯೦ದಿನಗಳ ಗಳಿಕೆ ರಜೆ ಅರ್ಜಿ ಸಲ್ಲಿಸಿದ್ದು , ಅದನ್ನು ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು ತಾ: ೨೫.೦೫.೨೦೦೧ರಂದು ಮಂಜೂರು ಮಾಡಿದ್ದರು ಎಂದು ತಿಳಿಸಿ ಅವರು ಈ ರಜೆ ಅವಧಿಯಲ್ಲಿ ಖಾಯಿಲೆ ಬಿದ್ದಿದ್ದರಿಂದ ಅವರ ಖಾಯಿಲೆಯ ಬಗ್ಗೆ ಎಸ್‌ಡಿಎಸ್ ಸ್ಯಾನಿಟೋರಿಯಂ ತಜ್ಞ ವೈದ್ಯರಿಂದ ತಪಾಸಣೆ ಮಾಡಿಸಿಕೊಂಡಾಗ "ರೈಟ್ ಸೈಡ್ ಪ್ಲೂರಲ್ ಎಫ್ಯೂಷನ್" ಎಂದು ಡಯಾಗ್ನೈಸ್ ಮಾಡಿ ಟ್ರೀಟ್‌ಮೆಂಟ್ ಶುರುಮಾಡಿದ್ದರು. ಆದ್ದರಿಂದ ಅವರ ರಜೆ ದಿ: ೧೨.೦೯.೨೦೦೧ರಂದು ಮುಗಿದಿದ್ದರೂ ವೈದ್ಯರ ಸಲಹೆಯಂತೆ ವೈದ್ಯಕೀಯ ಪ್ರಮಾಣ

ಪತ್ರದೊಂದಿಗೆ ಪುನಃ ದಿಃ ೧೩.೦೯.೨೦೦೧ರಿಂದ ೭೦ದಿನಗಳ ಸಂಯೋಜಿತ ರಜೆಗೆ ಅರ್ಜಿಯನ್ನು ಸಲ್ಲಿಸಿದ್ದಾಗಿ, ಅನಾರೋಗ್ಯದಿಂದ ಬಳಲುತ್ತಿದ್ದುದರಿಂದ ವಿಸ್ತರಿಸಿದ ರಜೆ ಮಂಜೂರು ಆಗುವವರೆಗೂ ಕಾಯದೆ ರಜೆ ಮಂಜೂರಾತಿಯನ್ನು ನಿರೀಕ್ಷಿಸಿ ರಜೆಯನ್ನು ಮುಂದುವರಿಸಿದುದಾಗಿ ತಿಳಿಸಿರುತ್ತಾರೆ.

೪. ಅವರು ವೈದ್ಯಕೀಯ ಕಾರಣದ ಮೇಲೆ ಸಲ್ಲಿಸಿದ್ದ ರಜೆ ಮಂಜೂರಾಗಿಲ್ಲವೆಂದು ತಿಳಿದುಬಂದಿದ್ದರಿಂದ ಹಾಗೂ ಅವರು ಸ್ವಲ್ಪಮಟ್ಟಿಗೆ ಗುಣಮುಖನಾಗಿದ್ದೇನೆಂದು ಅವರಿಗೆ ಅನಿಸಿದ್ದರಿಂದ ಅವರು ಕೇವಲ ೪೭ದಿನಗಳ ರಜೆ ಉಪಯೋಗಿಸಿಕೊಂಡು ದಿಃ ೩೧.೧೦.೨೦೦೧ರಂದು ಕರ್ತವ್ಯಕ್ಕೆ ಹಾಜರಾಗಿದ್ದು, ಆದರೆ ತಾಃ ೦೫.೧೧.೨೦೦೧ರಂದು ಅವರ ಆರೋಗ್ಯ ಹದಗೆಟ್ಟಿದ್ದರಿಂದ ಮತ್ತೆ ತಜ್ಞವೈದ್ಯರ ಹತ್ತಿರ ತಪಾಸಣೆ ಮಾಡಿಸಿಕೊಂಡಾಗ ಅವರು ಪರಿಶೀಲನೆ ಮಾಡಿ ಕಡ್ಡಾಯವಾಗಿ ವಿಶ್ರಾಂತಿ ಮತ್ತು ಔಷಧೋಪಚಾರ ಮುಂದುವರಿಸಬೇಕೆಂದು ಸಲಹೆ ನೀಡಿದ್ದರಿಂದ ಅದರಂತೆ ಪುನಃ ಅವರು ತಾಃ ೦೭.೧೧.೨೦೦೧ರಿಂದ ತಾಃ ೦೪.೦೨.೨೦೦೨ರವರೆಗೆ ೯೦ದಿನಗಳ ಪರಿವರ್ತಿತ ರಜೆ ಅರ್ಜಿಯನ್ನು ಸಲ್ಲಿಸಿದ್ದಾಗಿ ತಿಳಿಸಿರುತ್ತಾರೆ. ಈ ರಜೆ ಅವಧಿ ಮುಗಿಯುತ್ತಾ ಬಂದಾಗ ಸಂಪೂರ್ಣವಾಗಿ ಗುಣಮುಖರಾಗಿರುವ ಬಗ್ಗೆ ಹಾಗೂ ದೈಹಿಕ ಪ್ರಮಾಣ ಪತ್ರ ಪಡೆಯುವ ಬಗ್ಗೆ ಎಸ್‌ಡಿಎಸ್ ಸ್ಯಾನಿಟೋರಿಯಂನ ತಜ್ಞ ವೈದ್ಯರನ್ನು ಭೇಟಿಯಾದಾಗ ಅವರು, ಇವರನ್ನು ಪರೀಕ್ಷೆಮಾಡಿ ಮತ್ತೆ ವಿಶ್ರಾಂತಿ ಪಡೆಯಬೇಕೆಂದು ಸೂಚಿಸಿದ ಮೇರೆಗೆ ದಿಃ ೦೫.೦೨.೨೦೦೨ರಿಂದ ೩೦.೦೪.೨೦೦೨ರವರೆಗೆ ರಜೆಯನ್ನು ವಿಸ್ತರಿಸಿದ್ದಾರೆ. ದಿಃ ೧೭.೦೫.೨೦೦೨ರ ದೈಹಿಕ ದೃಢತಾ ಪತ್ರದೊಂದಿಗೆ ತಾಃ ೧೮.೦೫.೨೦೦೨ರಂದು ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ಕರ್ತವ್ಯದ ಮೇಲೆ ಹಾಜರಾಗಿದ್ದಾರೆ.

೫. ತಜ್ಞ ವೈದ್ಯರ ಸಲಹೆಯಂತೆ ಮತ್ತು ವೈದ್ಯಕೀಯ ಪ್ರಮಾಣ ಪತ್ರದೊಂದಿಗೆ ರಜೆ ಅರ್ಜಿಸಲ್ಲಿಸಿದ್ದು, ಆರೋಗ್ಯ ಸರಿಇಲ್ಲದ ಕಾರಣ ವೈದ್ಯರ ಸಲಹೆ ಮೇರೆಗೆ ರಜೆಯನ್ನು ಪದೇ ಪದೇ ವಿಸ್ತರಿಸಬೇಕಾಯಿತೇ ಹೊರತು ಉದ್ದೇಶಪೂರ್ವಕವಾಗಿ ಕರ್ತವ್ಯದಿಂದ ಹೊರಗೆ ಉಳಿಯಬೇಕೆಂಬ ದುರುದ್ದೇಶ ಅವರಲ್ಲಿರಲಿಲ್ಲವೆಂದು ತಿಳಿಸಿ ಅವರು ಗುಣಮುಖರಾದ ಮೇಲೆ ಕರ್ತವ್ಯಕ್ಕೆ ಹಾಜರಾಗಿದ್ದಾರೆ. ನಿಷ್ಠೆಯಿಂದ ಕರ್ತವ್ಯ ನಿರ್ವಹಿಸುತ್ತಿರುವುದಾಗಿ ಮತ್ತು ಸರ್ಕಾರಿ ಕೆಲಸಕ್ಕೆ ಯಾವುದೇ ಅಡಚಣೆಯುಂಟುಮಾಡಿಲ್ಲವೆಂದು ತಿಳಿಸಿ, ಆರೋಗ್ಯದಲ್ಲಿ ಸ್ವಲ್ಪ ಸುಧಾರಣೆ ಕಂಡುಬಂದ ತಕ್ಷಣ ಕರ್ತವ್ಯವೇ ಮುಖ್ಯವೆಂದು ತಾಃ ೩೧.೧೦.೨೦೦೧ರಿಂದ ೦೬.೧೧.೨೦೦೧ರವರೆಗೆ ಕರ್ತವ್ಯ ನಿರ್ವಹಿಸಿ ಅವರ ಕರ್ತವ್ಯ ನಿಷ್ಠೆಯನ್ನು ಸಾಬೀತುಪಡಿಸಿರುವುದಾಗಿ ತಿಳಿಸಿದ್ದಾರೆ.

೬. ಆದ್ದರಿಂದ ಅವರ ತಾಃ ೧೩.೦೯.೨೦೦೧ ರಿಂದ ೨೩.೦೭.೨೦೦೨ರವರೆಗೆ ೧೦ತಿಂಗಳು ಮತ್ತು ೧೧ದಿನಗಳು ಕರ್ತವ್ಯದಿಂದ ಗೈರುಹಾಜರಾಗಿದ್ದಾರೆಂದು ಪರಿಗಣಿಸಿ ಅವರ ವಿರುದ್ಧ ಶಿಸ್ತಿನಕ್ರಮ ಪ್ರಾರಂಭಿಸಲು ಉದ್ದೇಶಿಸಿ ದೋಷಾರೋಪಣೆ ಪಟ್ಟಿಯೊಂದಿಗೆ ನೀಡಿರುವ ಕಾರಣ ಕೇಳುವ ನೋಟೀಸ್‌ನ್ನು ಹಿಂತೆಗೆದುಕೊಂಡು ಅವರ ಮೇಲಿನ ಶಿಸ್ತಿನ ಕ್ರಮವನ್ನು ಇಲ್ಲಿಗೇ ಮುಕ್ತಾಯಗೊಳಿಸುವಂತೆ ಪ್ರಾರ್ಥಿಸಿರುತ್ತಾರೆ ಹಾಗೂ ವೈದ್ಯಕೀಯ ಪ್ರಮಾಣಪತ್ರದೊಂದಿಗೆ ಸಲ್ಲಿಸಿರುವ ತಾಃ ೧೩.೦೯.೨೦೦೧ರಿಂದ ಅವರು ಕರ್ತವ್ಯಕ್ಕೆ ಹಾಜರಾದ ದಿಃ ೧೮.೦೫.೨೦೦೨ರ ಅವಧಿಗೆ ಅವರ ಖಾತೆಯಲ್ಲಿರುವ ಹಾಗೂ ದೊರೆಯತಕ್ಕ ರಜೆ ಎಂದು ಪರಿಗಣಿಸಿ ಮಂಜೂರು ಮಾಡುವಂತೆಯೂ ಪ್ರಾರ್ಥಿಸಿರುತ್ತಾರೆ.

೭. ಅವರು ಸಲ್ಲಿಸಿರುವ ಲಿಖಿತ ರಕ್ಷಣಾ ಹೇಳಿಕೆ ಮತ್ತು ದಾಖಲೆ ಹಾಗೂ ದಸ್ತಾವೇಜುಗಳ ಬೆಳಕಿನಲ್ಲಿ ಈ ಪ್ರಕರಣವನ್ನು ಕೂಲಂಕಷವಾಗಿ ವಿಶ್ಲೇಷಿಸಲಾಗಿದೆ. ಅವರ ಗೈರುಹಾಜರಿ ಅವಧಿಗೆ ಸಮಂಜಸವಾದ ಮತ್ತು ಸಮರ್ಥನೀಯವಾದ ಕಾರಣಗಳನ್ನು ನೀಡಿರುವುದರಿಂದ ಅವುಗಳು ಅಂಗೀಕಾರಾರ್ಹ ಎಂದು ಸರ್ಕಾರ ಪರಿಗಣಿಸಿದೆ. ಆದಕಾರಣ ಅವರ ವಿರುದ್ಧದ ಶಿಸ್ತುಕ್ರಮದ ನಡವಳಿಯನ್ನು ಕೈಬಿಟ್ಟು ಅವರ ಗೈರುಹಾಜರಾತಿ ಅವಧಿಯನ್ನು ಸಕ್ರಮಗೊಳಿಸುವುದು ಉಚಿತ ಎಂದು ಕಂಡುಬಂದಿದೆ. ಗೈರುಹಾಜರಿ ಅವಧಿಗೆ ಅವರಿಗೆ ಲಭ್ಯವಿರುವ ರಜೆ ಶೀರ್ಷಿಕೆಯನ್ನು ಪಡೆಯಲು ಮಹಾಲೇಖಪಾಲರು(ಎ ಅಂಡ್ ಇ) ರವರೊಂದಿಗೆ ಸಮಾಲೋಚಿಸಲಾಗಿದೆ. ತಾಃ ೧೩.೦೯.೨೦೦೧ರಂತೆ ಅವರ ಹಕ್ಕಿನಲ್ಲಿ ೬೦ದಿನಗಳ ಗಳಿಕೆ ರಜೆ ಮತ್ತು ೪೦ದಿನಗಳ ಅರ್ಧವೇತನ ರಜೆ ಜಮೆಯಲ್ಲಿದೆ ಎಂದು ತಾಃ ೧೩.೦೯.೨೦೦೧ರಿಂದ ೨೩.೦೭.೨೦೦೨ರವರೆಗೆ ಅನಧಿಕೃತ ಗೈರುಹಾಜರಿ ಅವಧಿಯನ್ನು ಸಕ್ರಮಗೊಳಿಸಬೇಕಾಗಿದೆಯೆಂದು ಮಹಾಲೇಖಪಾಲರು ಸೂಚಿಸಿದ್ದಾರೆ.

ಸರ್ಕಾರಿ ಆದೇಶ ಸಂಖ್ಯೆ: ಆಕುಕ ೪ ಎಂಎಂಸಿ ೨೦೦೪, ಬೆಂಗಳೂರು, ದಿನಾಂಕ **೨೬ನೇ ಏಪ್ರಿಲ್ .೨೦೦೪**

೮. ಬೆಂಗಳೂರು ವೈದ್ಯಕೀಯ ಕಾಲೇಜಿನ ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕ ಡಾಃ ಟಿ.ಡಿ.ಪ್ರಕಾಶ್‌ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ೧೧೨ನೇ ನಿಯಮದಡಿ ತಾಃ ೧೩.೦೯.೨೦೦೧ ರಿಂದ ತಾಃ ೧೧.೧೧.೨೦೦೧ರವರೆಗಿನ ಅವಧಿಗೆ ೬೦ದಿನಗಳ ಗಳಿಕೆ ರಜೆಯನ್ನು , ೧೧೪ನೇ ನಿಯಮದಡಿ ತಾಃ ೧೨.೧೧.೨೦೦೧ರಿಂದ ತಾಃ ೨೧.೧೨.೨೦೦೧ರವರೆಗಿನ ಅವಧಿಗೆ ೪೦ದಿನಗಳ ಅರ್ಧವೇತನ ರಜೆಯನ್ನು ಮತ್ತು ೧೧೭ನೇ ನಿಯಮದಡಿ ಇನ್ನುಳಿದ ತಾಃ ೨೨.೧೨.೨೦೦೧ರಿಂದ ತಾಃ೨೩.೦೭.೨೦೦೨ರ ಅವಧಿಗೆ ೨೧೪ದಿನಗಳ ಅಸಾಧಾರಣ ರಜೆಯನ್ನು ಮಂಜೂರು ಮಾಡಲಾಗಿದೆ.

೯. ಮೇಲ್ಕಂಡ ರಜೆ ಮೇಲೆ ತೆರಳದಿದ್ದಲ್ಲಿ ಅವರು ಮೈಸೂರು ವೈದ್ಯಕೀಯ ಕಾಲೇಜಿನ : ಬೆಂಗಳೂರು ವೈದ್ಯಕೀಯ ಕಾಲೇಜಿನ ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕರ ಹುದ್ದೆಯಲ್ಲಿಯೇ ಸ್ಥಾನಪನ್ನದ ಮೇಲೆ ಮುಂದುವರಿಯುತ್ತಿದ್ದರು ಎಂದು ಪ್ರಮಾಣೀಕರಿಸಲಾಗಿದೆ.

೧೦. ಆಪಾದಿತರ ವಿರುದ್ಧದ ಶಿಸ್ತಿನ ಕ್ರಮದ ಇಲಾಖಾ ವಿಚಾರಣೆಯ ಮುಂದಿನ ನಡವಳಿಯನ್ನು ಕೈ ಬಿಡಲಾಗಿದೆ.

೧೧. ಭವಿಷ್ಯದಲ್ಲಿ ಯಾವುದೇ ಕಾರಣಕ್ಕೂ ಕರ್ತವ್ಯದಿಂದ ಅನಧಿಕೃತ ಗೈರುಹಾಜರಾಗುವಂತಹ ದುರ್ನಡತೆ ಎಸಗಬಾರದು ಎಂಬ ನಿರ್ದೇಶನದೊಂದಿಗೆ ಅವರಿಗೆ ಕಠಿಣವಾದ ಎಚ್ಚರಿಕೆಯನ್ನು ಸರ್ಕಾರ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಸ್. ನಾಗರಾಜು

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

PR-506

## AGRICULTURE AND HORTICULTURE SECRETARIAT

**Sub:** Continuation of Ongoing Plan Schemes of the Horticulture Department during 2004-05.

**Ref:** 1) G.O.No.AHD 133 HPP 2003 dated 5.5.2003

2) G.O.No. ಕೃತೋಇ 128 ತೋಯೋಕಾ 2003 ದಿನಾಂಕ 10.9.2003.

2) Letter of Director of Horticulture No. ,ತೋಇ :ಯೋ:ಸ:ತೋಅ 1:1:2004-2005, ದಿನಾಂಕ: 27.4.2004.

3) Proceedings of the meeting held on 28-4-2004 for continuation of Ongoing plan schemes for the year 2004-05

**PREAMBLE**:

In the G.O. read at (1) above, 14 Ongoing Plan Schemes and 192 posts of the Horticulture Department were sanctioned to be continued during the year 2003-04. Further, a scheme namely, Central Sector Scheme for drip irrigation (2401-00-108-2-30) was sanctioned in compliance to the budget speech 2003-04, as a State sector scheme as per the G.O. read at (2) above. Thus the Department of Horticulture has implemented 15 ongoing plan schemes during the year 2003-04.(State sector – 12, Mission Mode-2 and Macro Mode-1)

The Director of Horticulture in his letter read at (3) above has requested to sanction a total of 14 plan schemes as ongoing schemes and 192 posts during the year 2004-05. Plan allocation has been provided under two schemes namely, Direction and Administration (2401-00-001-2-01) and Horticultural Gardens (2406-02-112-0-13) during the current year which were in non-plan earlier. Two schemes namely, Tribal Area Sub-Plan (2401-00-796-2-00) and Special Component Plan (2401-00-800-2-05) were implemented by the Social Welfare Department so far. The Social Welfare Department use to pool the funds provided for Horticulture Department. Now it has been proposed to implement these two schemes by the Department of Horticulture. Five state sector schemes which were implemented during the year 2003-04 have been merged into different schemes. They are, Executive Establishment (2401-00-001-2-02) has been merged with Direction and Administration (2401-00-001-2-01), Modernisation of Horticulture Offices (2401-00-001-2-06) with Horticulture Buildings (2401-00-119-6-03), Production and Distribution of Quality Planting Material of Horticulture crops (2401-00-119-4-03) with Development and Maintenance of Farms and Nurseries (2401-00-119-4-05) Establishment of State Level Advance Training and Development Center for Horticulture (2401-00-800-2-20) with Extension and Training (2401-00-800-2-27) and Botanical and Ornamental Gardens (2406-02-112-0-07) with Horticultural Gardens (2406-02-112-0-13). Further, two schemes namely, Developing Undeveloped Areas in Farms and Nurseries and Development of New Farms (2401-00-119-4-05) as Development and Maintenance of Farms and Nurseries (2401-00-119-4-05) and Training and Library Services (2401-00-800-2-27) as Extension and Training (2401-00-800-2-27). There are no new schemes during the year 2004-05.

Regarding the number of posts to be continued during 2004-05 the Director of Horticulture has proposed that there will be no change. Hence the total number of posts to be continued remains at 192. (State Sector 47, Mission Mode 145)

In the meeting of the committee to clear Ongoing proposals of the Department of Horticulture held on 28-4-2004 under the Chairmanship of Principal Secretary (Horticulture), the proposal of Director of Horticulture was discussed in detail with the representatives of Planning Department, Finance Department and Internal Financial Advisor for Agriculture & Horticulture Department. It was decided to accord approval for continuation of 14 plan schemes of the Department of Horticulture on ongoing basis along with 192 posts during the year 2004-05. Hence this order.

**G.O.No. AHD 115 HPP 2004 BANGALORE, DATED: 29th April 2004**

Government is pleased to accord sanction to the Director of Horticulture to implement 14 Ongoing Schemes [11 State Sector, 2 Mission Mode and 1 Macro Mode (Work Plan)] along with 192 posts during the year 2004-05 that is from 1-4-2004 to 31-3-2005 subject to the following conditions on ongoing basis as per the existing guidelines. The scheme details, allocations and details of the posts continued have been given in the Annexure appended to this G.O.

1) The schemes approved as Ongoing Schemes for the year 2004-2005 will be implemented to the extent not exceeding to the allocation made in the Budget for the year 2004-2005.

2) The schemes under Mission Mode and Macro Management will be implemented strictly as per the Government of India guidelines in its administrative sanctions/Work Plan approval and to the extent of the allocations and targets fixed. These schemes will be implemented only after the release of funds from Government of India /respective Board. In respect of all the central sector schemes budget releases will be made from the State Government only after receiving the credit confirmation from Budget-2 section of Finance Department. Only then the schemes are to be implemented.

3) Revalidation proposals for the leftover funds as on 1-4-2004 for utilization during the year 2004-2005 under the Work Plan and Mission Mode or Board Assisted Schemes will be submitted to Agriculture Ministry, Government of India by the Director of Horticulture under intimation to the State Government in time.

4) Separate sanctions should be obtained from the Empowered Committee headed by the Principal Secretary, Finance Department with regard to additional/new components in the sanctioned ongoing schemes relating to purchase of vehicles, equipments, machineries and creation of posts.

5) Purchases if any are to be made strictly in accordance with the Karnataka Transparency in Public Procurements Act 1999.

6) The Director of Horticulture will arrange to prepare physical and financial targets scheme wise, district wise and will make MMRs. It will be communicated to the implementing officers under intimation to the Government.

7) The Director of Horticulture will obtain the approval of the Technical Advisory Panel for Agriculture & Horticulture Department (TAP) before purchasing computers as per Rules.

This order issues as per the powers delegated to the Secretaries vide, Para No.38 of the G.O.No. F.D. 1 TFP 96 DATED 10-7-1996.

BY ORDER AND IN THE NAME OF GOVERNOR OF KARNATAKA

**N. MANJULA GEETHA**
Under Secretary to Government,
Agriculture & Horticulture Department

**ANNEXURE**

**STATEMENT SHOWING THE SCHEMES, ALLOCATIONS, HEAD OF ACCOUNT AND DETAILS OF POSTS CONTINUED UNDER ONGOING SCHEMES OF THE DEPARTMENT OF HORTICULTURE DURING 2004-05 (G. O .NO AHD 115 HPP 2004 DATED 29-04-2004)**

| Sl No | Scheme and Head of Account | Budget Book Page No. | Amount Ear-marked | Details of Posts continued | No. of Posts |
|---|---|---|---|---|---|
| | **STATE SECTOR:** | | | | |
| 1 | Direction and Administration 2401-00-001-2-01 | 7 | 6.50 | Asst.Director of Horticulture | 1 |
| | | | | Asst. Hortl.Officer | 2 |
| | | | | Horticulture Assistant | 5 |
| | | | | Gardner | 4 |
| | | | | First Division Asst. | 1 |
| | | | | Driver | 3 |
| | | | | **Total** | **16** |
| 2 | Central Sector Scheme for drip irrigation 2401-00-108-2-30 | 31 | 300.00 | | - |
| 3 | Development and maintenance of farms and nurseries 2401-00-119-4-05 | 45-46 | 50.00 | | - |
| 4 | Development of Departmental Laboratories 2401-00-119-5-01 | 46-47 | 25.00 | A) **O/O DDH (Plant Nutrition),Bangalore** | |
| | | | | Horticulture Asst. | 1 |
| | | | | B) **O/O JDH (Bio Technology, Bangalore)** | |
| | | | | Horticulture Asst. | 1 |
| | | | | Gardener | 2 |
| | | | | Driver | 1 |
| | | | | C) **O/O SADH (Tissue culture Lab) Bangalore** | |
| | | | | Asst. Hortl. Officer | 1 |
| | | | | D) **O/O SADH, (Leaf Analysis Lab.) Shimoga** | |
| | | | | Sr.Asst. Director of Horticulture | 1 |
| | | | | Asst.Hortl.Officer | 2 |
| | | | | Second Division Asst. | 1 |
| | | | | Hortl. Assistant | 1 |
| | | | | Typist | 1 |
| | | | | Watchman | 2 |
| | | | | **Total** | **14** |
| 5 | Scheme for Integrated control of pests and diseases of Horticulture crops 2401-00-119-5-02 | 47 | 30.00 | Hortl. Assistant | 4 |
| | | | | Gardener | 4 |
| | | | | Lab Attender | 4 |
| | | | | Driver | 5 |
| | | | | **Total** | **17** |

| Sl No | Scheme and Head of Account | Budget Book Page No. | Amount Ear-marked | Details of Posts continued | No. of Posts |
|---|---|---|---|---|---|
| 6 | Horticulture Buildings<br>2401-00-119-6-03 | 47 | 53.00 | | **-** |
| 7 | Tribal Area Sub-Plan<br>2401-00-796-2-00 | 66 | 52.05 | | **-** |
| 8 | Special Component Plan<br>2401-00-800-2-05 | 70 | 130.61 | | - |
| 9 | Cold Storage Subvention<br>2401-00-800-2-25 | 71 | 25.96 | | - |
| 10 | Extension and Training<br>2401-00-800-2-27 | 71 | 17.00 | | - |
| 11 | Horticultural Gardens<br>2406-02-112-0-13<br>**Sub Total** | 207 | 79.40<br><br>**769.52** | | <br><br>**47** |
| 12 | **MISSION MODE**:<br>Oil Palm cultivation in potential states<br>(75% GOI )<br>2401-00-108-2-18 | 30 | 160.00 | **A) Monitoring of TMOP Scheme**<br>Addl. Director of Horticulture (Oil palm)<br>Sr.Asst.Director of Horticulture<br>Asst.Hortl.Officer<br>Superintendent<br>First Division Asst.<br>Second Division Asst.<br>Typist<br>Peon<br>**TOTAL** | <br>1<br>1<br>1<br>1<br>1<br>3<br>1<br>3<br>**12** |
| | | | | **B) Oil Palm Seed Garden**<br>Asst. Director of Hortl.<br>Second Division Asst.<br>Typist<br>Peon<br>Watchman<br>Horticulture Assistant<br>Gardener<br>**Total** | <br>1<br>1<br>1<br>1<br>2<br>2<br>10<br>**18** |
| | | | | **C) Frontline Demonstration**<br>Asst.Director Horticulture<br>Asst. Hortl. Officer<br>First Division Asst.<br>Driver<br>Peon<br>Watchman<br>Horticulture Assistant<br>Gardener<br>**TOTAL** | <br>1<br>2<br>1<br>1<br>1<br>5<br>6<br>15<br>**32** |
| | | | | **D) Area expansion (State Level)**<br>Office Manager<br>First Division Asst.<br>Second Division Asst.<br>Typist<br>Driver<br>Peon<br>Computer Operator<br>Stenographer<br>**TOTAL** | <br>1<br>1<br>1<br>1<br>4<br>1<br>1<br>1<br>**11** |

| Sl No | Scheme and Head of Account | Budget Book Page No. | Amount Ear-marked | Details of Posts continued | No. of Posts |
|---|---|---|---|---|---|
| | | | | **E) Area Expansion (Field Level)** | |
| | | | | Senior Asst. Director of Horticulture | 6 |
| | | | | Asst. Hortl.Officer | 13 |
| | | | | First Division Asst. | 6 |
| | | | | Typist | 6 |
| | | | | Driver | 6 |
| | | | | Peon | 5 |
| | | | | Watchman | 6 |
| | | | | Horticulture Asst. | 13 |
| | | | | Gardener | 11 |
| | | | | **TOTAL** | **72** |
| | | | | **OPDP TOTAL** | **145** |
| 13 | Scheme for integrated farming in coconut for productivity improvement with CDB assistance (100%CDB) 2401-00-108-2-35 | 31 | 300.00 | | **-** |
| | **Sub Total** | | **460.00** | | **145** |
| 14 | **MACRO MODE**: Development of Horticulture under new macro management mode 2401-00-800-2-23<br>**Components:**<br>Development of the following<br>1. Spices<br>2. Cocoa<br>3. Tropical and Arid Zone fruits<br>4. Aromatic and Medicinal plants<br>5. Mushroom<br>6. Vegetables<br>7. Commercial Floriculture<br>8. Use of Plastics in Agriculture<br>9. Cashew<br>10. Project Formulation, Innovation, Evaluation, Research and Development<br>11. Training & Publicity<br>12. Bio Technology Centre and Plant Nutrition Programmes<br>13. Integrated pest management<br>14. Organic farming in Horticulture | 71 | 1555.55 | | |
| | **Sub Total** | | 1555.55 | | - |
| | **Grand Total** | | 2785.07 | | 192 |

**Note:** All the schemes except Sl.No.2 above have been sanctioned by G.O.No.AHD 133 HPP 2003 dated 5.5.2003 and the scheme at Sl.No.2 has been sanctioned vide G.O.No. ಕೃತೋಇ 128 ತೋಯೋಕಾ 2003 ದಿನಾಂಕ 10.9.2003.

PR-511

**N. MANJULA GEETHA**
Under Secretary to Government
Agriculture & Horticulture Department.

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ :** ತೋಟಗಾರಿಕೆ ಜಂಟಿ ನಿರ್ದೇಶಕರು (ಸಸ್ಯ ಸಂರಕ್ಷಣೆ), (ಜಾಗೃತದಳ) ಮತ್ತು (ಸಂಶೋಧನೆ, ಅಭಿವೃದ್ಧಿ ಮತ್ತು ಯೋಜನೆಗಳು) ಈ ಮೂರು ಹುದ್ದೆಗಳನ್ನು 2003-04ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 69 ತೋಸೇಪ 2000 ದಿನಾಂಕ: 3.7.2000.
2. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 171 ತೋಸೇಪ 2002 ದಿನಾಂಕ: 5.7.2003.
3. ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್ ಬೆಂಗಳೂರು ಇವರ ಪತ್ರದ ಸಂ:ತೋಇ/ಯೋ/ಸತೋಅ-1/5/2003-04 ದಿನಾಂಕ: 24.1.2004

**ಪ್ರಸ್ತಾವನೆ:**

ಜಲಾನಯನ ಅಭಿವೃದ್ಧಿ ಇಲಾಖೆ ರಚನೆ ಆದ ನಂತರ ರಾಜ್ಯ ಜಲಾನಯನ ಅಭಿವೃದ್ಧಿ ನಿರ್ದೇಶನಾಲಯದಲ್ಲಿನ ಹೆಚ್ಚುವರಿ ಹುದ್ದೆಗಳ ಪೈಕಿ ತೋಟಗಾರಿಕೆ ಇಲಾಖೆಗೆ ಅಧ್ಯರ್ಪಿಸಲಾದ ಈ ಕೆಳಕಂಡ 3 ತೋಟಗಾರಿಕೆ ಜಂಟಿ ನಿರ್ದೇಶಕರ ಹುದ್ದೆಗಳನ್ನು ದಿನಾಂಕ 31.3.2002 ರಿಂದ ದಿನಾಂಕ 1.4.2003 ರವರೆಗೆ ಮೇಲೆ ಓದಲಾದ (2)ರ ಆದೇಶದಲ್ಲಿ ಮುಂದುವರಿಸಲಾಗಿತ್ತು.

1) ತೋಟಗಾರಿಕೆ ಜಂಟಿ ನಿರ್ದೇಶಕರು (ಸಸ್ಯ ಸಂರಕ್ಷಣೆ) ಲಾಲ್‌ಬಾಗ್, ಬೆಂಗಳೂರು.
2) ತೋಟಗಾರಿಕೆ ಜಂಟಿ ನಿರ್ದೇಶಕರು (ಜಾಗೃತ ತಂಡ) ಲಾಲ್‌ಬಾಗ್, ಬೆಂಗಳೂರು.
3) ತೋಟಗಾರಿಕೆ ಜಂಟಿ ನಿರ್ದೇಶಕರು (ಸಂಶೋಧನೆ, ಅಭಿವೃದ್ಧಿ ಮತ್ತು ಯೋಜನೆಗಳು) ಲಾಲ್‌ಬಾಗ್, ಬೆಂಗಳೂರು.

ರಾಜ್ಯದಲ್ಲಿ ಜಲಾನಯನ ಅಭಿವೃದ್ಧಿಗೆ ಪ್ರತ್ಯೇಕ ಇಲಾಖೆ ರಚನೆ ಆದ ನಂತರ, ಈ ಹಿಂದೆ ಇದ್ದ ಜಲಾನಯನ ಅಭಿವೃದ್ಧಿ ನಿರ್ದೇಶನಾಲಯಕ್ಕೆ ಒಳಪಟ್ಟ ಕೆಲವೊಂದು ಹುದ್ದೆಗಳನ್ನು ಆಯಾ ಮಾತೃ ಇಲಾಖೆಗೆ ಶಾಶ್ವತವಾಗಿ ವರ್ಗಾಯಿಸಲಾಗಿದೆ. ಅದರಂತೆ ಅಲ್ಲಿ ಹೆಚ್ಚುವರಿ ಹುದ್ದೆಗಳು ಎಂದು ಪರಿಗಣಿಸಲ್ಪಟ್ಟ 3 ತೋಟಗಾರಿಕೆ ಜಂಟಿ ನಿರ್ದೇಶಕರ ಹುದ್ದೆಗಳನ್ನು ದಿನಾಂಕ 31.3.2000 ರಿಂದ ಜಾರಿಗೆ ಬರುವಂತೆ ಮೇಲೆ ಓದಲಾದ (1)ರ ದಿನಾಂಕ 3.7.2000 ರ ಆದೇಶದಲ್ಲಿ ಶಾಶ್ವತವಾಗಿ ತೋಟಗಾರಿಕೆ ಇಲಾಖೆಗೆ ವರ್ಗಾಯಿಸಲಾಗಿದೆ.

ಜಲಾನಯನ ಅಭಿವೃದ್ಧಿ ಇಲಾಖೆಯಿಂದ ಹಿಂತಿರುಗಿಸಿರುವ ಈ ಹುದ್ದೆಗಳು ತಾತ್ಕಾಲಿಕ ಹುದ್ದೆಗಳಾಗಿರುವುದರಿಂದ ಇವುಗಳ ಸಿಂಧುತ್ವ ದಿನಾಂಕ: 31.3.2003ಕ್ಕೆ ಮುಕ್ತಾಯಗೊಂಡಿರುವುದರಿಂದ ಇವುಗಳನ್ನು ಮುಂದುವರಿಸುವಂತೆ ತೋಟಗಾರಿಕೆ ನಿರ್ದೇಶಕರು, ಲಾಲಾಬಾಗ್, ಬೆಂಗಳೂರು ಇವರು ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿದ್ದಾರೆ.

ಮೇಲೆ ಓದಲಾದ (2) ರ ಸರ್ಕಾರಿ ಆದೇಶದಲ್ಲಿ ಈ ಹುದ್ದೆಗಳನ್ನು 2002-2003ನೇ ಸಾಲಿಗೆ ಮುಂದುವರೆಸಿ ವೆಚ್ಚವನ್ನು ಲೆಕ್ಕಶೀರ್ಷಿಕೆ 2401-00-001-2-01 (ಯೋಜನೇತರ) ರಡಿಯಲ್ಲಿ ಭರಿಸಲು ಆದೇಶಿಸಲಾಗಿದೆ. ದಿನಾಂಕ: 5.7.2003 ರಂದು ತೋಟಗಾರಿಕೆ ಜಂಟಿ ನಿರ್ದೇಶಕರು (ಜಾಗೃತ ತಂಡ) ಮತ್ತು ತೋಟಗಾರಿಕೆ ಜಂಟಿ ನಿರ್ದೇಶಕರು (ಸಂಶೋಧನೆ, ಅಭಿವೃದ್ಧಿ ಮತ್ತು ಯೋಜನೆಗಳು) ಈ ಎರಡೂ ಹುದ್ದೆಗಳನ್ನು ರದ್ದುಪಡಿಸಿ ಅನುಕ್ರಮವಾಗಿ ತೋಟಗಾರಿಕೆ ಅಪರ ನಿರ್ದೇಶಕರು (ಬೆಳೆಗಳ ನಿರ್ವಹಣೆ) ಹಾಗೂ ತೋಟಗಾರಿಕೆ ಅಪರ ನಿರ್ದೇಶಕರು (ಸಂಪನ್ಮೂಲ ನಿರ್ವಹಣೆ) ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಿ ಸರ್ಕಾರದ ಆದೇಶ ಸಂಖ್ಯೆ: ಕೃತೋಇ 21 ತೋಸೇಪ 2001 ರಲ್ಲಿ ಆದೇಶ ಹೊರಡಿಸಲಾಗಿದೆ. ಈ ಹಿನ್ನಲೆಯಲ್ಲಿ ತೋಟಗಾರಿಕೆ ಜಂಟಿ ನಿರ್ದೇಶಕರು (ಸಸ್ಯಸಂರಕ್ಷಣೆ) ಹುದ್ದೆಯನ್ನು 2003-04ನೇ ಸಾಲಿನಲ್ಲಿ ಅಂದರೆ ದಿನಾಂಕ: 1.4.2003 ರಿಂದ ದಿನಾಂಕ: 31.3.2004 ರವರೆಗೆ ಮುಂದುವರಿಸಬೇಕಾಗುತ್ತದೆ ಹಾಗೂ ದಿನಾಂಕ 5.7.2003ರ ಆದೇಶದಲ್ಲಿ ತೋಟಗಾರಿಕೆ ಜಂಟಿ ನಿರ್ದೇಶಕರು (ಜಾಗೃತ ತಂಡ) ಮತ್ತು ತೋಟಗಾರಿಕೆ ಜಂಟಿ ನಿರ್ದೇಶಕರು (ಸಂಶೋಧನೆ, ಅಭಿವೃದ್ಧಿ ಮತ್ತಿ ಯೋಜನೆಗಳು) ಈ ಎರಡೂ ಹುದ್ದೆಗಳನ್ನು ರದ್ದುಪಡಿಸಿ ಅನುಕ್ರಮವಾಗಿ ತೋಟಗಾರಿಕೆ ಅಪರ ನಿರ್ದೇಶಕರು (ಬೆಳೆಗಳ ನಿರ್ವಹಣೆ) ಹಾಗೂ ತೋಟಗಾರಿಕೆ ಅಪರ ನಿರ್ದೇಶಕರು (ಸಂಪನ್ಮೂಲ ನಿರ್ವಹಣೆ) ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ. ತದನಂತರ ದಿನಾಂಕ: 14.7.2003ರ ತಿದ್ದುಪಡಿ ಆದೇಶದಲ್ಲಿ ಹೊಸದಾಗಿ ಸೃಜಿಸಲಾಗಿರುವ ಅಪರ ನಿರ್ದೇಶಕರ ಎರಡು ಹುದ್ದೆಗಳಲ್ಲಿ. ಅಧಿಕಾರಿಗಳು ಕರ್ತವ್ಯಕ್ಕೆ ಹಾಜರಾಗುವವರೆಗೂ ರದ್ದುಪಡಿಸಲಾದ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅಧಿಕಾರಿಗಳನ್ನು ಆಯಾಯ ಹುದ್ದೆಗಳಲ್ಲೇ ಮುಂದುವರೆಸಲು ಅನುಮತಿ ನೀಡಲಾಗಿದೆ. ಈ ಆದೇಶಗಳನ್ವಯ ತೋಟಗಾರಿಕೆ ಜಂಟಿ ನಿರ್ದೇಶಕರು (ಜಾಗೃತ ತಂಡ) ಹುದ್ದೆಯನ್ನು ದಿನಾಂಕ 1.4.2003 ರಿಂದ ದಿನಾಂಕ: 19.12.2003 ರವರೆಗೆ ಮತ್ತು ತೋಟಗಾರಿಕೆ ಜಂಟಿ ನಿರ್ದೇಶಕರು (ಸಂಶೋಧನೆ, ಅಭಿವೃದ್ಧಿ ಮತ್ತು ಯೋಜನೆಗಳು) ಹುದ್ದೆಯನ್ನು ದಿನಾಂಕ 1.4.2003 ರಿಂದ 26.12.2003 ರವರೆಗೆ ಮುಂದುವರಿಸಬೇಕಾಗುತ್ತದೆ. ಹಾಗೂ ದಿನಾಂಕ: 5.7.2003 ರಿಂದ ಮೇಲ್ದರ್ಜೆಗೇರಿಸಿರುವ ಎರಡು ತೋಟಗಾರಿಕೆ ಅಪರ ನಿರ್ದೇಶಕರ ಹುದ್ದೆಗಳಲ್ಲಿ ತೋಟಗಾರಿಕೆ ಅಪರ ನಿರ್ದೇಶಕರು (ಬೆಳೆಗಳ ನಿರ್ವಹಣೆ) ಹುದ್ದೆಯನ್ನು ದಿನಾಂಕ: 20.12.2003 ರಿಂದ ದಿನಾಂಕ: 31.3.2004 ರವರೆಗೆ ಹಾಗೂ ತೋಟಗಾರಿಕೆ ಅಪರ ನಿರ್ದೇಶಕರು (ಸಂಪನ್ಮೂಲ ನಿರ್ವಹಣೆ) ಹುದ್ದೆಯನ್ನು ದಿನಾಂಕ: 27.12.2003 ರಿಂದ ದಿನಾಂಕ: 31.3.2004 ರವರೆಗೆ ಮುಂದುವರೆಸಬೇಕಾಗುತ್ತದೆ ಎಂದು ಮೇಲೆ ಓದಲಾದ (3) ರ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರು ಕೋರಿದ್ದಾರೆ.

ತೋಟಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 182 ತೋಸೇಪ 2003 ಬೆಂಗಳೂರು, ದಿನಾಂಕ: 12ನೇ ಮೇ 2004.**

2003-04ನೇ ಸಾಲಿಗೆ ತೋಟಗಾರಿಕೆ ಜಂಟಿ ನಿರ್ದೇಶಕರು ಮತ್ತು ತೋಟಗಾರಿಕೆ ಅಪರ ನಿರ್ದೇಶಕರುಗಳ ಹುದ್ದೆಗಳನ್ನು ಈ ಕೆಳಕಂಡಂತೆ ಮುಂದುವರಿಸಲು ಅನುಮತಿಸಿ ಆದೇಶಿಸಿದೆ.

| ಕ್ರ. ಸಂ. | ಹುದ್ದೆ | ಹುದ್ದೆಗಳ ಸಂಖ್ಯೆ | 2003-04ನೇ ಸಾಲಿನಲ್ಲಿ ಮುಂದುವರಿಸಬೇಕಾದ ಅವಧಿ |
|---|---|---|---|
| 1. | ತೋಟಗಾರಿಕೆ ಜಂಟಿ, ನಿರ್ದೇಶಕರು (ಸಸ್ಯ ಸಂರಕ್ಷಣೆ) | 1 | ದಿನಾಂಕ: 1.4.2003 ರಿಂದ 31.3.2004 ರವರೆಗೆ |
| 2. | ತೋಟಗಾರಿಕೆ ಜಂಟಿ, ನಿರ್ದೇಶಕರು (ಜಾಗೃತ ದಳ) | 1 | ದಿನಾಂಕ: 1.4.2003 ರಿಂದ 19.12.2003 ರವರೆಗೆ |
| 3. | ತೋಟಗಾರಿಕೆ ಜಂಟಿ, ನಿರ್ದೇಶಕರು (ಸಂಶೋಧನೆ, ಅಭಿವೃದ್ಧಿ ಮತ್ತು ಯೋಜನೆಗಳು) | 1 | ದಿನಾಂಕ: 1.4.2003 ರಿಂದ 26.12.2003 ರವರೆಗೆ |
| 4. | ತೋಟಗಾರಿಕೆ ಅಪರ, ನಿರ್ದೇಶಕರು (ಬೆಳೆಗಳ ನಿರ್ವಹಣೆ) | 1 | ದಿನಾಂಕ: 20.12.2003 ರಿಂದ 31.3.2004 ರವರೆಗೆ |
| 5. | ತೋಟಗಾರಿಕೆ ಅಪರ, ನಿರ್ದೇಶಕರು (ಸಂಪನ್ಮೂಲ ನಿರ್ವಹಣೆ) | 1 | ದಿನಾಂಕ: 27.12.2003 ರಿಂದ 31.3.2004 ರವರೆಗೆ |

ಈ ಹುದ್ದೆಗಳನ್ನು ಯೋಜನೇತರ ಅಡಿಯಲ್ಲಿ ಮುಂದುವರಿಸಿ ವೆಚ್ಚವನ್ನು ಲೆಕ್ಕಶೀರ್ಷಿಕೆ 2401-00-001-2-01 (ಯೋಜನೇತರ) ಅಡಿಯಲ್ಲಿ ಭರಿಸಲು ಆದೇಶಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಕೃತೋಇ 66 ಆಂಅಸ 2004 ದಿನಾಂಕ: 8.4.2004 ರನ್ವಯ ಸಹಮತಿ ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಮಂಜುಳಗೀತ**

ಪಿ.ಆರ್. 512 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯ ಅನುಷ್ಠಾನಕ್ಕಾಗಿ ಪೀಠೋಪಕರಣಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಲೋಇ 69: ಇಎಪಿ: 2001: ದಿನಾಂಕ: 14.3.2002.

2. ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯ ಮುಖ್ಯ ಯೋಜನಾಧಿಕಾರಿ, ಇವರ ಕಡತ ಸಂಖ್ಯೆ: ಕೆಶಿಪ್:ಪಿಎಫ್ಎಂ: 85/2003-04 (ಏಕ ಕಡತ ವ್ಯವಸ್ಥೆ).

ಪ್ರಸ್ತಾಪಿಸಿರುವ ವಿಷಯಕ್ಕೆ ಸಂಬಂಧಿಸಿದಂತೆ ಮೇಲ್ಕಂಡ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯ ವಿವಿಧ ಕಛೇರಿಗಳ ಉಪಯೋಗಕ್ಕಾಗಿ ರೂ. 23.00 ಲಕ್ಷದ ಪೀಠೋಪಕರಣಗಳನ್ನು ಖರೀದಿಸಲು ಅನುಮೋದನೆ ನೀಡಲಾಗಿತ್ತು. ಅದರಂತೆ ಯೋಜನಾ ಅನುಷ್ಠಾನ ಘಟಕವು ಪೀಠೋಪಕರಣಗಳನ್ನು ಖರೀದಿಸಿ ವಿವಿಧ ಯೋಜನಾ ಕಛೇರಿಗಳಿಗೆ ಒದಗಿಸಲಾಗಿದೆ.

ತದನಂತರ ಇನ್ನೊಂದು ಯಲ್ಲಾಪುರ ವಿಭಾಗ ಕಛೇರಿ ಮತ್ತು ಇದಕ್ಕೆ ಸಂಬಂಧಿಸಿದಂತೆ ಇನ್ನೂ ಎರಡು ಉಪ ವಿಭಾಗ ಕಛೇರಿಗಳನ್ನು ತೆರೆಯಲು ಸರ್ಕಾರದಿಂದ ಅನುಮತಿ ನೀಡಲಾಗಿದೆ. ಇದಲ್ಲದೆ ಯೋಜನಾ ಅನುಷ್ಠಾನ ಕಛೇರಿಗಳಲ್ಲಿ ಅನುಮೋದಿತ ಸಿಬ್ಬಂದಿಗಳನ್ನು ನಿಯೋಜಿಸಿರುವುದರಿಂದ ಇನ್ನೂ ಪೀಠೋಪಕರಣಗಳ ಅವಶ್ಯಕತೆ ಹೆಚ್ಚಿರುತ್ತದೆ. ಮುಂದುವರಿದು ಯೋಜನಾ ಅನುಷ್ಠಾನ ಘಟಕದಲ್ಲಿ ಹೆಚ್ಚಿನ ರೀತಿಯ ಟೆಂಡರು ದಾಖಲಾತಿಗಳು ಗುತ್ತಿಗೆದಾರರ ಬಿಲ್ಲುಗಳು ಮತ್ತು ವೋಚರ್‌ಗಳನ್ನು ವಿಶ್ವಬ್ಯಾಂಕಿನ ಮತ್ತು ಅಕೌಂಟೆಂಟ್ ಜನರಲ್‌ರವರ ಲೆಕ್ಕ ಪರಿಶೋಧನೆ ಹಾಗೂ ತಪಾಸಣೆಗಾಗಿ ಯೋಜನಾ ಅವಧಿಯು ಮುಗಿಯುವವರೆಗೂ ಸುರಕ್ಷಿತವಾಗಿ ಇಡಲು ಕಪಾಟುಗಳ ಅವಶ್ಯಕತೆ ಇರುತ್ತದೆ. ಇವುಗಳ ಖರೀದಿಗೆ ಒಟ್ಟು ರೂ.16.50 ಲಕ್ಷ ಅವಶ್ಯಕತೆ ಇರುತ್ತದೆಂದು ಯೋಜನಾ ನಿರ್ದೇಶಕರು ತಿಳಿಸಿದ್ದಾರೆ.

ಪೀಠೋಪಕರಣಗಳನ್ನು ಖರೀದಿಸುವ ಮೊತ್ತವನ್ನು ವಿಶ್ವಬ್ಯಾಂಕಿನಿಂದ ಮಂಜೂರಾದ ಯೋಜನಾ ಹಣದಿಂದ ಮರುಪಾವತಿ ಮೂಲಕ ಭರಿಸಲಾಗುವುದು. ಆದುದರಿಂದ ಈ ಕೆಳಗಿನ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 22 ಇಎಪಿ 2004 ಬೆಂಗಳೂರು ದಿನಾಂಕ: 10ನೇ ಮೇ 2004**

ಮೇಲಿನ ಅಂಶಗಳನ್ನು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ನೀಡಿದೆ.

1. ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ ಕಛೇರಿ ಕೆಲಸಗಳಿಗೆ ಅನುಕೂಲವಾಗುವಂತಹ ಅವಶ್ಯಕತೆ ಇರುವ ಪೀಠೋಪಕರಣಗಳನ್ನು ರೂ.16.50 (ಹದಿನಾರು ಲಕ್ಷದ ಐವತ್ತು ಸಾವಿರ ರೂ.ಗಳು ಮಾತ್ರ) ಲಕ್ಷಗಳಿಗೆ ಮೀರದಂತೆ ಖರೀದಿಸಲು ಅನುಮೋದಿಸಿದೆ.

2. ಈ ವೆಚ್ಚವನ್ನು ವಿಶ್ವಬ್ಯಾಂಕ್‌ನಿಂದ ಮಂಜೂರಾದ ಯೋಜನಾ ಹಣದಿಂದ ಮರುಪಾವತಿ ಮೂಲಕ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಲೆಕ್ಕ ಶೀರ್ಷಿಕೆ 5054-03-337-0-81 (ಡೆವಲಪ್‌ಮೆಂಟ್ ಆಫ್ ಹೈವೇಸ್, ಡಬ್ಲ್ಯೂಬಿಎ) ನಿಂದ ಭರಿಸುವುದು.

3. ಸರ್ಕಾರದಿಂದ ರಚಿಸಲಾಗಿರುವ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯ ಸ್ಟೀರಿಂಗ್ ಕಮಿಟಿಯ ದಿನಾಂಕ: 29.10.2003 ರಂದು ನಡೆದ 15ನೆಯ ಸಭೆಯಲ್ಲಿ ನಿರ್ಣಯಿಸಿದಂತೆ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಬ್ಲ್ಯೂಡಿ 240/ಎಫ್‌ಸಿ.1/2004 (ಲೋಕೋಪಯೋಗಿ ಆರ್ಥಿಕ ಕೋಶ) ದಿನಾಂಕ: 8.4.2004 ರ ಸಹಮತಿಯೊಂದಿಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 514

**ಜಿ. ಎಸ್. ನರಸಿಂಹಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ(ಇಎಪಿ).

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ :** ಶ್ರೀ ಕೆ.ಲಕ್ಷ್ಮೀಕಾಂತ, ಮಾಜಿ ಎಪಿಸಿ ೧೯೭, ಡಿಎಆರ್, ದಕ್ಷಿಣ ಕನ್ನಡ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ :**
೧ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ದಕ್ಷಿಣ ಕನ್ನಡ ಜಿಲ್ಲೆ ರವರ ಆದೇಶ ಸಂಖ್ಯೆ:ಇ .ವಿ/೫/೯೨-೯೩ ದಿನಾಂಕ:೧೭-೧೧-೯೩.
೨ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು ರವರ ಆದೇಶ ಸಂಖ್ಯೆ:ಸಿಬ್ಬಂದಿ/ಮೇಲ್ಮನವಿ/೧೫,೧೬,೧೭,೧೮ ಮತ್ತು ೧೯/೯೪-೯೫ ದಿನಾಂಕ:೨೫-೩-೯೫.
೩ ಅರ್ಜಿದಾರರ ಮನವಿ ದಿನಾಂಕ:೧೫-೧೦-೨೦೦೩.
೪ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(೨)/೮೮/೨೦೦೩-೦೪ ದಿನಾಂಕ:೨೪-೨-೨೦೦೪.

**ಪ್ರಸ್ತಾವನೆ:**

ಶ್ರೀ ಲಕ್ಷ್ಮೀಕಾಂತ, ಮಾಜಿ ಎಪಿಸಿ, ಡಿಎಆರ್, ದಕ್ಷಿಣ ಕನ್ನಡ ಜಿಲ್ಲೆ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರ ನಿಯಮ ೬ ಮತ್ತು ಅರಡಿ ಜಂಟೀ ಇ ಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ದಿನಾಂಕ:೨೯-೪-೯೨ರ ಬೆಳಿಗ್ಗೆ ಸುಮಾರು ೧೦.೩೦ ಗಂಟೆ ಸಮಯದಲ್ಲಿ ಜಿಲ್ಲಾ ವೆನ್‌ಲಾಕ್ ಆಸ್ಪತ್ರೆಯ ಖೈದಿ ಸೆಲ್‌ನಿಂದ ಮಂಗಳೂರು ಕಸ್ಟಂನ ಇ ಲಾಖೆಯವರು ಮಾಡಿದ ಪ್ರಕರಣದಲ್ಲಿಯ ಆರೋಪಿತರ ಪೈಕಿ ಒಬ್ಬರಾದ ಅನ್ವರ್ ಅಬ್ದುಲಿ, ವಾಸ ಗಾಂಧಿನಗರ, ಜಮುಲಾ ನಗರ ಜಿಲ್ಲೆ, ಗುಜರಾತ್ ಈತನು ಪರಾರಿಯಾಗಲು ಅವಕಾಶ ನೀಡಿ ಕರ್ತವ್ಯದಲ್ಲಿ ನಿರ್ಲಕ್ಷ್ಯ ತೋರಿಸಿದ್ದಕ್ಕಾಗಿ ೯ ಗಂಟೆಯಿಂದ ೧೨ ಗಂಟೆಯ ಪಹರೆ ಕರ್ತವ್ಯದಲ್ಲಿದ್ದ ಎಪಿಸಿ ೧೯೭ ಲಕ್ಷ್ಮೀಕಾಂತ ಮತ್ತು ಸಹಾಯಕ ಕಾವಲು ಪಹರೆಯ ಕರ್ತವ್ಯದಲ್ಲಿದ್ದ ಎಪಿಸಿ ೨೧ ಪುಷ್ಪರಾಜ ಇ ವರು ಕರ್ತವ್ಯಲೋಪವೆಸಗಿ ಮಂಗಳೂರು ದಕ್ಷಿಣ ಠಾಣೆಯ ಅಪರಾಧ ಸಂ.೧೩೫/೯೨ ಕಲಂ.೨೨೪/೧೧೪/೨೨೫(ಎ) ಜೊತೆಗೆ ೩೪ ಭಾದಸಂ. ಪ್ರಕಾರ ಪ್ರಕರಣ ದಾಖಲಾಗಲು ಕಾರಣರಾದುದಲ್ಲದೇ ಈ ಬಗ್ಗೆ ಆಸ್ಪತ್ರೆಯ ಖೈದಿ ಸೆಲ್ಲಿನ ಗಾರ್ಡ್ ಇನ್‌ಚಾರ್ಜ್ ಎಹೆಚ್‌ಸಿ ೬೦ ಮಹಾದೇವ ಇ ವರು ಮಧ್ಯಾಹ್ನ ೧೨ ಗಂಟೆಯವರೆಗೆ ಇ ರಬೇಕಾದವರು ಕರ್ತವ್ಯದ ಮೇಲಿರದೆ ಗೈರು ಹಾಜರಾಗಿ ಕರ್ತವ್ಯಲೋಪವೆಸಗಿರುತ್ತಾರೆ. ಎಪಿಸಿ ೪೪ ನಾರಾಯಣ ಬೆಳಿಗ್ಗೆ ೮ ಗಂಟೆಯಿಂದ ೯ ಗಂಟೆಯವರೆಗೆ ಪಹರೆ ಕರ್ತವ್ಯದಲ್ಲಿದ್ದವರು ಈ ವೇಳೆಯಲ್ಲಿ ಮೂರು ಜನ ಅಪರಿಚಿತರನ್ನು ಖೈದಿ ಸೆಲ್ಲಿನ ಹತ್ತಿರ ಬಿಟ್ಟು ಆರೋಪಿ ಅನ್ವರ್ ಅಬ್ದುಲ್ ಇ ವರ ಜೊತೆ ಮಾತನಾಡಲು ಅವಕಾಶ ಮಾಡಿಕೊಟ್ಟು ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆಯನ್ನು ತೋರಿದ್ದಾರೆ. ಎಪಿಸಿ ೧೩೪ ಚಂದ್ರಹಾಸ ಇ ವರು ದಿನಾಂಕ:೨೮-೪-೯೨ರಂದು ಸಂಜೆ ೬ ಗಂಟೆಯಿಂದ ರಾತ್ರಿ ೯ ಗಂಟೆಯವರೆಗೆ ಕರ್ತವ್ಯಕ್ಕೆ ಗೈರು ಹಾಜರಾಗಿ ದಿನಾಂಕ:೨೯-೪-೯೨ರಂದು ಮಧ್ಯಾಹ್ನ ೧೨ ಗಂಟೆಗೆ ಬಂದಿರುತ್ತಾರೆ. ರಾತ್ರಿ ೧೧ ಗಂಟೆಯಿಂದ ಬೆಳಿಗ್ಗೆ ೧೨ ಗಂಟೆಯವರೆಗೆ ಕರ್ತವ್ಯದಲ್ಲಿರಬೇಕಾದವರು ಅನಧಿಕೃತವಾಗಿ ಗೈರು ಹಾಜರಾಗಿ ಕರ್ತವ್ಯಲೋಪವೆಸಗಿ ತೀವ್ರ ದುರ್ನಡತೆ ತೋರಿರುವರು."

೨. ಮೇಲ್ಕಂಡ ಆರೋಪ ಇ ಲಾಖಾ ವಿಚಾರಣೆಯಲ್ಲಿ ನಿಸ್ಸಂದೇಹವಾಗಿ ಸಾಬೀತಾದ್ದರಿಂದ ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿಗಳು ಅರ್ಜಿದಾರರನ್ನು ಸೇವೆಯಿಂದ ತೆಗೆದು ಹಾಕಿರುತ್ತಾರೆ.

೩. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲ್ಮನವಿ ಪ್ರಾಧಿಕಾರಿ ಮೇಲೆ (೨)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

೪. ಮೇಲ್ಕಂಡ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇ ಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

೧) ಕ್ರಿಮಿನಲ್ ಮೊಕದ್ದಮೆಯಲ್ಲಿ ತಾನು ಖುಲಾಸೆಗೊಂಡಿರುವುದರಿಂದ ತಮ್ಮನು ಇ ಲಾಖಾ ವಿಚಾರಣೆಯಲ್ಲಿಯೂ ಸಹ ನಿರ್ದೋಷಿ ಎಂದು ಪರಿಗಣಿಸಬೇಕು.

೨) ನ್ಯಾಯಾಲಯ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿರುವುದಿಲ್ಲ.

೩) ಇ ಲಾಖಾ ವಿಚಾರಣೆಯಲ್ಲಿನ ಆರೋಪ ಮತ್ತು ಕ್ರಿಮಿನಲ್ ಪ್ರಕರಣದಲ್ಲಿನ ಆರೋಪ ಒಂದೇ ಆಗಿದ್ದು, ನ್ಯಾಯಾಲಯ ಪ್ರಕರಣದಲ್ಲಿ ಖುಲಾಸೆ ಗೊಂಡಿರುವುದರಿಂದ ತಮ್ಮನ್ನು ಸೇವೆಯಲ್ಲಿ ಪುನರ್‌ಸ್ಥಾಪಿತಗೊಳಿಸಬೇಕು.

ಅರ್ಜಿದಾರರ ವಾದಾಂಶಗಳನ್ನು ಇ ಲಾಖಾ ವಿಚಾರಣೆ ದಾಖಲೆಗಳಲ್ಲಿನ ಸಾಕ್ಷ್ಯಾಧಾರಗಳ ಆಧಾರದ ಮೇಲೆ ಪರಿಶೀಲಿಸಲಾಗಿದೆ ಇ ಲಾಖಾ ವಿಚಾರಣೆ ಪ್ರಕ್ರಿಯೆ ಬೇರೆ. ಕ್ರಿಮಿನಲ್ ಪ್ರಕರಣದ ವಿಚಾರಣಾ ಪ್ರಕ್ರಿಯೆ ಬೇರೆ ಬೇರೆ. ಎರಡಕ್ಕೂ ತಳಕು ಹಾಕಲು ಬರುವುದಿಲ್ಲ. ಕ್ರಿಮಿನಲ್ ಮೊಕದ್ದಮೆಯಲ್ಲಿನ ವಿಚಾರಣೆಯಲ್ಲಿ ಎವಿಡೆನ್ಸ್ ಆಕ್ಟ್‌ನ ಪ್ರಕಾರ ಸಾಕ್ಷ್ಯಾಧಾರಗಳ ಮೇಲೆ ನಿರ್ಣಯ ಕೈಗೊಳ್ಳಲಾಗುತ್ತದೆ. ಆದರೆ ಇ ಲಾಖಾ ವಿಚಾರಣೆಯಲ್ಲಿ ಸಾಂದರ್ಭಿಕ ಸಾಕ್ಷ್ಯಗಳ ಆಧಾರದ ಮೇಲೆ ನಿರ್ಣಯ ತೆಗೆದುಕೊಳ್ಳಲಾಗುತ್ತದೆ.

೫.ಪ್ರಸ್ತುತ ಪ್ರಕರಣದಲ್ಲಿ ೯ ಅ.ಸಾ.ಗಳು ಅರ್ಜಿದಾರರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದನ್ನು ಸ್ಪಷ್ಟವಾಗಿ ನುಡಿದಿದ್ದು ಇ ದರ ಆಧಾರದಿಂದ ಅವರ ಗೈರುಹಾಜರಿ ಸಾಬೀತಾಗಿರುತ್ತದೆ. ಗೈರುಹಾಜರಿಯ ಸಮಯದಲ್ಲಿ ವಿಚಾರಣಾಧೀನ ಖೈದಿ ತಪ್ಪಿಸಿಕೊಂಡಿರುತ್ತಾರೆ. ಇ ವರು ಎಸಗಿರುವ ತಪ್ಪಿಗೆ ವಿಧಿಸಿರುವ ಶಿಕ್ಷೆ ಅನುಗುಣವಾಗಿದೆ. ಇ ದರಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯವಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ ೨೧೭ ಪೊಸೆಅ ೨೦೦೩, ಬೆಂಗಳೂರು, ದಿನಾಂಕ: ೩೦ನೇ ಏಪ್ರಿಲ್ ೨೦೦೪.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿಯನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಲಕ್ಷ್ಮೀಕಾಂತ, ಮಾಜಿ ಎಪಿಸಿ, ಡಿಎಆರ್, ದಕ್ಷಿಣ ಕನ್ನಡ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್.೫೨೩ ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇ ಲಾಖೆ (ಪೊಲೀಸ್ ಸೇವೆಗಳು).

**ವಿಷಯ :** ಶ್ರೀ ಗುರುಬಸವರಾಜ, ಸಿಪಿಸಿ ೮೫೧, ಬಳ್ಳಾರಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
೧ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ರವರ ಆದೇಶ ಸಂಖ್ಯೆ:ಸಿಬ್ಬಂದಿ/ಡಿಇ /೪/೯೮-೯೯ ಓಬಿ ಸಂಖ್ಯೆ:೧೭೮/೨೦೦೦ ದಿನಾಂಕ: ೫-೧-೨೦೦೦.
೨ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಆದೇಶ ಸಂಖ್ಯೆ:ಅಪೀಲು(೧)೪೬/೯೯-೨೦೦೦ ದಿನಾಂಕ:೨೪-೧೦-೨೦೦೧.
೩ ಅರ್ಜಿದಾರರ ಮನವಿ ದಿನಾಂಕ:೨೦-೨-೨೦೦೨.
೪ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(೨)೪/ ೨೦೦೨-೦೩ ದಿನಾಂಕ:೯-೧-೨೦೦೪.

**ಪ್ರಸ್ತಾವನೆ:**

ಶ್ರೀ ಗುರುಬಸವರಾಜ, ಪಿಸಿ ೮೫೧, ಕಮಲಾಪುರ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ ರವರ ವಿರುದ್ಧ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರ ನಿಯಮ ೬ ಮತ್ತು ೮ ರಡಿ ಜಂಟಿ ಇ ಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

ನೀವು ಕಮಲಾಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ:೨೬-೨-೯೮ರಂದು ಮಧ್ಯಾಹ್ನ ೨.೩೦ ಗಂಟೆಯ ಸಮಯದಲ್ಲಿ ಕಮಲಾಪುರ ವಾರ್ಡ್‌ನಂ.೪ರ ಇ ಬ್ಬರು ಹುಡುಗರು ಪವರ್ ಕೆನಾಲ್ ದಂಡೆಯ ಹತ್ತಿರ ಇ ದ್ದ ೨ ಬ್ಯಾಗ್, ಸ್ಪೆಕ್ಸ್, ದಿಕ್ಸೂಚಿ, ಸರ್ಚ್‌ಲೈಟ್ ಒಂದು ಜೊತೆ ಬಟ್ಟೆಗಳು, ಪುಸ್ತಕ, ೬೫-೭೦ ರೂ ನಗದು ಹಣ ಮತ್ತು ಕೋರಿಯಾ ದೇಶದ ವಿದೇಶಿ ಶೂ-ಸ್ಯಾಂಗ್-ಜೋ ಇ ವರ ವಿಸಾಕಾರ್ಡ್‌ಗಳು ಇ ದ್ದು, ಠಾಣಾಧಿಕಾರಿ ಹೆಚ್‌ಸಿ ೧೬ ರವರು ಬರಹಗಾರರಾದ ನಿಮ್ಮ ಕೈಯಲ್ಲಿ ಕೊಟ್ಟಿದ್ದು ಈ ಬಗ್ಗೆ ಪಿಎಸ್‌ಐ ಸಲೀಂ ಪಾಷ ರವರ ಗಮನಕ್ಕೂ ಸಹ ತಂದಿರುತ್ತಾರೆ.ನಂತರ ನೀವು ಸದರಿ ಪಿಎಸ್‌ಐ ರವರ ಆದೇಶದಂತೆ ಕಾನೂನು ಬಾಹಿರವಾಗಿ ಇ ವುಗಳನ್ನು ಸುಟ್ಟು ನಾಶ ಮಾಡಿರುತ್ತೀರಿ. ಇ ದರಿಂದ ಕಾಣೆಯಾದ ಕೊರಿಯಾ ವಿದೇಶಿ ಶೂ-ಸ್ಯಾಂಗ್-ಜೋ ಬಗ್ಗೆ ಪತ್ತೆ ಮಾಡುವಲ್ಲಿ ಹಾಗೂರ ಕಮಲಾಪುರ ಠಾಣೆಯಲ್ಲಿ ದಿನಾಂಕ:೭-೨-೯೮ರಂದು ವರದಿಯಾದ ಯು.ಡಿ.ಆರ್. ನಂ.೬/೯೮ರಲ್ಲಿ ಸಹ ಅನಾಮಧೇಯ ಗಂಡಸಿನ ಮೃತದೇಹಕ್ಕೆ ಹೋಲಿಕೆ ಮಾಡುವಲ್ಲಿ ತನಿಖೆಗೆ ಅವಕಾಶವಾಗದಂತೆ ಮಾಡಿ ಕರ್ತವ್ಯದಲ್ಲಿ ದುರ್ನಡತೆ ಎಸಗಿರುತ್ತೀರಿ. ಅಲ್ಲದೇ

(೧) ದೊರೆತ ವಿದೇಶೀಯ ವ್ಯಕ್ತಿಯ ವಸ್ತುಗಳನ್ನು ಪ್ರಾಮಾಣಿಕವಾಗಿ ಸಾರ್ವಜನಿಕರು ಪೊಲೀಸ್ ಠಾಣೆಗೆ ತಂದು ಒಪ್ಪಿಸಿದ್ದರೂ ಅವರ ವಾರಸುದಾರರನ್ನು ಪತ್ತೆ ಹಚ್ಚಬೇಕಾದ ನೀವು ಪಿಎಸ್‌ಐ ರವರ ಹೇಳಿಕೆಯಂತೆ ಅವುಗಳನ್ನು ಸುಟ್ಟು ಹಾಕಿ ನಾಶ ಮಾಡಿ ತನಿಖೆಗೆ ಅವಕಾಶವಾಗದಂತೆ ಮಾಡಿದ್ದೀರಿ.

(೨) ಕೋರಿಯಾ ದೇಶದ ಶೂ-ಸ್ಯಾಂಗ್-ಜೋ ಠಾಣೆಯಾದ ಬಗ್ಗೆ ವ್ಯಾಪಕವಾಗಿ ಪ್ರಚಾರ ಪಡಿಸಿದ್ದು, ಈ ಬಗ್ಗೆ ಕಮಲಾಪುರ, ಹಂಪಿ ಮತ್ತು ಹೊಸಪೇಟೆಯ ಸುತ್ತಮುತ್ತ ಎಲ್ಲಾ ಸಾರ್ವಜನಿಕರಿಗೂ ಕಾಣೆಯಾದ ವಿಷಯದ ಬಗ್ಗೆ ಗೊತ್ತಿದ್ದು ನೀವು ದೊರೆತ ಆತನ ವಸ್ತುಗಳ ಬಗ್ಗೆ ಮೇಲಾಧಿಕಾರಿಗಳ ಗಮನಕ್ಕೆ ತಾರದೇ ಒಬ್ಬ ಅಧಿಕಾರಿಯ ಮಾತನ್ನು ಕೇಳಿ ಅವುಗಳನ್ನು ನಾಶ ಮಾಡಿ ತನಿಖೆಯು ತಪ್ಪು ದಾರಿಗೆ ಹೋಗುವಂತೆ ಮಾಡಿರುತ್ತೀರಿ.

(೩) ಸಿಪಿಐ ರವರು ದಿನಾಂಕ:೭-೨-೯೮ರಂದು ಯುಡಿಆರ್ ಪ್ರಕರಣ ವರದಿಯಾದಾಗ ಕೇಂದ್ರಸ್ಥಾನದಲ್ಲಿ ಇ ಂದೇ ತುಮಕೂರು ಸೆಷನ್ಸ್ ನ್ಯಾಯಾಲಯಕ್ಕೆ ಹೇಳಿಕೆ ನೀಡಲು ಹೋಗಿದ್ದು, ವಾಪಸ್ ಬಂದು ಸದರಿ ಯುಡಿಆರ್ ಪ್ರಕರಣದಲ್ಲಿ ವಿಚಾರಿಸಲಾಗಿ ಸಿಕ್ಕ ಶವ ನಮ್ಮ ದೇಶದ ಅನಾಮಧೇಯ ವ್ಯಕ್ತಿಯ ಶವ ಅನ್ನುವ ರೀತಿಯಲ್ಲಿ ತಿಳಿಸಿ ಅವರ ಮುಂದೆ ಸಹ ಯಾವುದೇ ನಿಜಾಂಶವನ್ನು ತಿಳಿಸದೇ ಮರೆ ಮಾಡಿರುತ್ತೀರಿ.

(೪) ದೊರೆತ ವಸ್ತುಗಳು ಮತ್ತು ದುರ್ಮರಣಕ್ಕೀಡಾದ ವಿದೇಶಿಯ ಪ್ರಜೆಯದೆ ಎಂದು ಗೊತ್ತಿದ್ದರೂ ನೀವು ಠಾಣೆಯ ಬರಹಗಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಮೇಲಾಧಿಕಾರಿಯವರ ಗಮನಕ್ಕೆ ತಂದು ಮತ್ತು ಕಾಣೆಯಾದ ವಿದೇಶಿಯ ಪ್ರಜೆಯ ಪತ್ತೆ ಬಗ್ಗೆ ಇ ತರೆ ಸಿಬ್ಬಂದಿಯವರ ಗಮನಕ್ಕೆ ತರಬೇಕಾದ ನೀವೇ ಅಮೂಲ್ಯವಾದ ಸಾಕ್ಷ್ಯಾಧಾರಗಳನ್ನು ಸುಟ್ಟು ಅತೀವ ಕರ್ತವ್ಯ ದುರ್ನಡತೆ ತೋರಿಸಿರುತ್ತೀರಿ.

ಮೇಲ್ಕಂಡ ದೋಷಾರೋಪಗಳ ಬಗ್ಗೆ ನಡೆದ ಇ ಲಾಖಾ ವಿಚಾರಣೆಯಲ್ಲಿ ಅರ್ಜಿದಾರರ ಮೇಲಿನ ಆರೋಪ ಸಾಬೀತಾಗಿಲ್ಲ ಎಂಬ ಇ ಲಾಖಾ ವಿಚಾರಣೆ ವರದಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಅ.ಸಾ.೧೧ರ ಹೇಳಿಕೆಯ ಆಧಾರದ ಮೇಲೆ ಆರೋಪ ಸಾಬೀತಾಗಿದೆ ಎಂಬ ನಿರ್ಧಾರಕ್ಕೆ ಬಂದು ಮೇಲೆ(೧)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ ಒಂದು ವರ್ಷಕಾಲ ಮುಂದೂಡಿರುತ್ತಾನೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (೨)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇ ಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

(೧) ತಾನು ವಿದೇಶಿ ವ್ಯಕ್ತಿಯ ವಸ್ತುಗಳನ್ನು ಸುಟ್ಟು ಹಾಕಿಲ್ಲ. ಅ.ಪೋ.ಅ.೧.ರವರಿಗೆ ನೀಡಿದ್ದು ಅವರೇನು ಮಾಡಿದ್ದಾರೆ ಎಂದು ತನಗೆ ಗೊತ್ತಿಲ್ಲ.

(೨) ಸಿಪಿಐ ರವರು ತನಗೆ ಕೇಳಿಲ್ಲವಾದ್ದರಿಂದ ಅವರಿಗೆ ತಾನು ವಿಷಯ ತಿಳಿಸಿಲ್ಲ.

(೩) ತಾನು ಸಾಮಾನ್ಯ ಪೇದೆಯಾಗಿದ್ದು ಯಾವುದೇ ಪ್ರಕರಣದ ತನಿಖಾಧಿಕಾರಿಯಾಗಿಲ್ಲ.

ಅರ್ಜಿದಾರರ ವಾದಾಂಶಗಳಲ್ಲಿ ಸತ್ಯವಿರುವುದಿಲ್ಲ. ಅ.ಸಾ.೧೦,೧೧,೧೨ ಠಾಣೆಯಲ್ಲಿ ಇ ದ್ದಾಗ ಸದರಿ ವಸ್ತುಗಳನ್ನು ನೀಡಿದ್ದೆವು ಎಂದು ಅಂಬರೀಷ್ ಮತ್ತು ನೀಲಪ್ಪ ರವರ ಹೇಳಿಕೆಯಿಂದ ಸಾಬೀತಾಗಿದೆ ಎಂದು ಮೇಲ್ಮನವಿ ಪ್ರಾಧಿಕಾರಿ ಅಭಿಪ್ರಾಯ ವ್ಯಕ್ತ ಪಡಿಸಿರುತ್ತಾರೆ. ಇ ದರಿಂದಾಗಿ ಅರ್ಜಿದಾರರು ಸುಳ್ಳು ವಾದಾಂಶ ಮಂಡಿಸಿರುತ್ತಾರೆ ಅನ್ನುವುದು ನಿಸ್ಸಂದೇಹವಾಗಿ ಸಾಬೀತಾಗಿದೆ. ಅವರು ಎಸಗಿರುವ ತಪ್ಪಿಗೆ ವಿಧಿಸಿರುವ ಶಿಕ್ಷೆ ಅನುಗುಣವಾಗಿದೆ ಎಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ ೮೦ ಪೊಸಿಅ ೨೦೦೩, ಬೆಂಗಳೂರು, ದಿನಾಂಕ: ೯ನೇ ಏಪ್ರಿಲ್ ೨೦೦೪.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗುರುಬಸವರಾಜ, ಪಿಸಿ ೮೫೧, ಬಳ್ಳಾರಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್.೫೨೪

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇ ಲಾಖೆ, (ಪೊಲೀಸ್ ಸೇವೆಗಳು).

**ವಿಷಯ :** ಕಾರಾಗೃಹಗಳ ಸಿಬ್ಬಂದಿ ಕಲ್ಯಾಣ ನಿಧಿಗೆ ಧನ ಸಹಾಯ ನೀಡುವ ಬಗ್ಗೆ.

**ಓದಲಾಗಿದೆ :** ಪೋಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು ಬೆಂಗಳೂರು ಇವರ ಪತ್ರ ಸಂಖ್ಯೆ: ಲೆ4: ಅನುದಾನ: ಸಿಆರ್-12: 02-03 ದಿನಾಂಕ: 12.9.2003.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 12.9.2003ರ ಪತ್ರದಲ್ಲಿ ಪೋಲಿಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ಇವರು ದಿನಾಂಕ 19.5.2003ರ ಸರ್ಕಾರದ ಆದೇಶ ಸಂಖ್ಯೆ: ಒಸಾಇ 185 ಪಿಆರ್ಎ 2001ರಲ್ಲಿ ಕಾರಾಗೃಹಗಳ ಇಲಾಖೆಯ ಸಿಬ್ಬಂದಿ ಕಲ್ಯಾಣ ನಿಧಿಗೆ ರೂ.5.00 ಲಕ್ಷಗಳ ಧನ ಸಹಾಯ ಬಿಡುಗಡೆ ಮಾಡಿದ್ದು, ಸದರಿ ಮೊತ್ತಕ್ಕೆ ಬಿಲ್ಲನ್ನು ಮುಖ್ಯ ಲೆಕ್ಕ ಶೀರ್ಷಿಕೆ 2056-00-800-0-06 ಸಿಬ್ಬಂದಿಗಳ ಕಲ್ಯಾಣ ನಿಧಿಯಲ್ಲಿ ಖಜಾನೆಗೆ ಸಲ್ಲಿಸಿರುವ ಖಜಾನಾಧಿಕಾರಿಗಳು ಈ ಬಿಲ್ಲಿನಲ್ಲಿ ನಮೂದಿಸಿರುವ ಸಬ್ ಹೆಡ್ ತಪ್ಪಾಗಿದೆ ಎಂದು ಆಕ್ಷೇಪಿಸಿರುವುದರಿಂದ ಬಿಡುಗಡೆಯಾದ ರೂ. 5.00 ಲಕ್ಷಗಳ ಹಣವನ್ನು ಕಾರಾಗೃಹಗಳ ಸಿಬ್ಬಂದಿ ಕಲ್ಯಾಣ ನಿಧಿಗೆ ಯಾವ ಲೆಕ್ಕ ಶೀರ್ಷಿಕೆಯಲ್ಲಿ ಪಡೆಯಬೇಕೆಂದು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 281 ಪಿಆರ್ಎ 2003, ಬೆಂಗಳೂರು ದಿನಾಂಕ: 12ನೇ ಮೇ 2004**

ಕಾರಾಗೃಹಗಳ ಇಲಾಖೆಯ ಸಿಬ್ಬಂದಿ ಕಲ್ಯಾಣ ನಿಧಿಗೆ 2004-05ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2056-00-800-0-06 ಸಿಬ್ಬಂದಿಗಳು ಇದರ ಅಡಿಯಲ್ಲಿ ರೂ. 5.00 ಲಕ್ಷಗಳನ್ನು ಆಯವ್ಯಯದಲ್ಲಿ ಒದಗಿಸಲಾಗಿದೆ. ಈ ಧನ ಸಹಾಯವನ್ನು ಒನ್ ಟೈಂ ಅನುದಾನವನ್ನಾಗಿ ಬಿಡುಗಡೆ ಮಾಡಲು ಆದೇಶಿಸಿದೆ. ಇನ್ನು ಮುಂದೆ ಇಲಾಖೆಯು ತನ್ನ ಸಂಪನ್ಮೂಲವನ್ನು ಹೆಚ್ಚಿಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳುವಂತೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 44 ವೆ-6: 2004, ದಿನಾಂಕ: 5.4.2004 ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಕೆ. ಗುರಾಣಿ**

ಪಿ.ಆರ್. 520

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ, (ಸೆರೆಮನೆ ಮತ್ತು ಸಿನಿಮಾ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸಾರ್ವಜನಿಕ ದೂರು ನಿವಾರಣಾ ವಿಭಾಗದ ನಾಮಾಂಕಿತವನ್ನು 'ಜನಸ್ಪಂದನಾ ಕೋಶ' ಎಂಬುದಾಗಿ ಬದಲಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 216 ಎಸ್‌ಜಿಬಿ 83 ದಿನಾಂಕ: 8.6.1983.

2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 229 ಸಆಸೇ 95 ದಿನಾಂಕ: 20.7.1995.
3. ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಸಾ.ದೂ.ವಿ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 16 ಯೋಮಸ 2004, ದಿನಾಂಕ: 16.3.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 8.6.1983ರ ಸರ್ಕಾರದ ಆದೇಶದಲ್ಲಿ ಸಾರ್ವಜನಿಕರ ಕುಂದುಕೊರತೆಗಳನ್ನು ನಿವಾರಿಸಲು ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ 'ಸಾರ್ವಜನಿಕ ಕುಂದುಕೊರತೆಗಳ ನಿವಾರಣಾ ಸಂಸ್ಥೆಯನ್ನು 'ಸೃಜಿಸಲಾಗಿದೆ' ನಂತರ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 20.7.1995ರ ಸರ್ಕಾರಿ ಆದೇಶದಲ್ಲಿ ಸಾರ್ವಜನಿಕ ದೂರು ವಿಭಾಗವನ್ನು ಮುಖ್ಯ ಮಂತ್ರಿಗಳ ನೇರ ನಿಯಂತ್ರಣಕ್ಕೆ ಒಳಪಡಿಸಲಾಗಿರುತ್ತದೆ.

ಪ್ರಸ್ತುತ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಾರ್ವಜನಿಕ ದೂರು ನಿವಾರಣಾ) ವಿಭಾಗ ಇವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 16.3.2004ರ ಅನಧಿಕೃತ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯ ಕಾರ್ಯದರ್ಶಿಯವರ ಆದೇಶದಂತೆ ಸಾರ್ವಜನಿಕ ದೂರು ನಿವಾರಣಾ ವಿಭಾಗದ ನಾಮಾಂಕಿತವನ್ನು 'ಜನಸ್ಪಂದನಾ ಕೋಶ' ಎಂದು ಬದಲಾಯಿಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 29 ಸಸಿವಿ 2004, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಾರ್ವಜನಿಕ ದೂರು ನಿವಾರಣಾ) ವಿಭಾಗದ ನಾಮಾಂಕಿತವನ್ನು ತಕ್ಷಣದಿಂದ ಜಾರಿಗೆ ಬರುವಂತೆ 'ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಜನಸ್ಪಂದನಾ ಕೋಶ)' ಎಂಬುದಾಗಿ ಬದಲಾಯಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು. ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

ಪಿ.ಆರ್. 516

**ಆರ್ಥಿಕ ಸಚಿವಾಲಯ**

**ಅಧಿಕೃತ ಜ್ಞಾಪನ ಸಂಖ್ಯೆ: ಆಇ 106 ಸಲುಲಾ 2004 ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2004**

**ವಿಷಯ :** ದಿನಾಂಕ: 1.1.2004ರಲ್ಲಿದ್ದಂತೆ ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯಲ್ಲಿನ ಉಪ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಚುರಪಡಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆಇ 187 ಸಲುಲಾ 2003 ದಿನಾಂಕ: 13.11.2003.

ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಉಪ ನಿರ್ದೇಶಕರ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2004 ರಲ್ಲಿದ್ದಂತೆ ಈ ಕೆಳಕಂಡಂತೆ ಪ್ರಕಟಿಸಲಾಗಿದೆ:

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ: | ಜನ್ಮ ದಿನಾಂಕ | ಸರ್ಕಾರದ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯ ದಿನಾಂಕ |
|---|---|---|---|---|
| 1. | ಕೆ.ಎನ್. ರಾಮಸ್ವಾಮಿ | 24.07.1947 | 08.09.1975 | 20.11.1989 |
| 2. | ಆರ್. ಬಸವಣ್ಣ | 10.12.1949 | 01.06.1977 | 06.07.1995 |
| 3. | ಓ. ಬೊಮ್ಮಣ್ಣ | 08.11.1953 | 01.10.1981 | 11.08.1995 |
| 4. | ಎಸ್. ಎನ್. ಪಟವಾರಿ | 16.02.1947 | 10.11.1975 | 02.08.2001 |
| 5. | ಎಸ್. ಹೆಚ್. ಕೊಟ್ಟೂರ್‌ಕರ್ | 01.01.1947 | 29.12.1969 | 02.08.2001 |
| 6. | ದಿನಕರ್‌ರಾವ್ ಅತ್ತೂರ್‌ಕರ್ | 25.10.1947 | 26.04.1966 | 02.08.2001 |
| 7. | ಬಿ. ದೊಡ್ಡನರಸಯ್ಯ | 02.03.1948 | 21.07.1976 | 02.08.2001 |

ಈ ಜೇಷ್ಠತಾ ಪಟ್ಟಿಯ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಅಂತಹ ಅಧಿಕಾರಿಗಳು ಈ ಅಧಿಕೃತ ಜ್ಞಾಪನ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳನ್ನು ಇಲಾಖಾ ನಿರ್ದೇಶಕರ ಮುಖಾಂತರ ಸರ್ಕಾರಕ್ಕೆ ಕಳುಹಿಸಿ ಕೊಡತಕ್ಕದ್ದು. ಈ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಬಾರದಿದ್ದಲ್ಲಿ ಈ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿ ಪ್ರಕಟಿಸಲು ಕ್ರಮ ತೆಗೆದುಕೊಳ್ಳಲಾಗುತ್ತದೆ.

**ಎನ್. ಪ್ರಭಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

ಪಿ.ಆರ್. 517

**PERSONNEL AND ADMINISTRATIVE REFORMS SECRETARIAT**

**Sub :** Revocation of suspension and posting of Sri. A. K. Monnappa, IAS (KN-1992).

**Read :**
1. G. O. No. DPAR 667 SAS 2002, dated: 06.11.2003.
2. Letter dated 30.04.2004 of Sri A. K. Monnappa, IAS., Bangalore.
3. G. O. No. DPAR 667 SAS 2002 dated: 04.5.2004.

**Order No. DPAR 667 SAS 2002, Bangalore, dated: 12th May 2004**

Whereas an order placing Sri. A.K.Monnapa, IAS (KN-1992), former Secretary, Karnataka Public Service Commission, Bangalore, under suspension until further orders was made by the Government of Karnataka on 06.11.2003 vide Government Order read at Sl.No. (1) above, pending institution of

disciplinary proceedings in the matter of irregularities in the valuation of answer scripts of the candidates appeared for the Gazetted Probationers Group "A" & "B" (Main) Examination 1998 conducted by the Karnataka Public Service Commission.

Whereas. Sri. A. K. Monnappa, I.A.S. in letter dated: 06.03.2004 and 30.04.2004 has requested to reinstate him and issue posting orders.

Whereas, the Government of Karnataka has considered his request and decided to revoke the order of suspension, pending proceedings against him.

Now, therefore, the Government of Karnataka in exercise of the powers conferred by rule 3(7) of AIS (D&A) Rules, 1969, hereby revoke the said order of suspension and reinstate Sri. A.K.Monnappa, IAS, in service with immediate effect, pending proceedings against him.

On reinstatement into service, the services of Sri. A.K. Monnappa, IAS. are placed at the disposal of Energy Department until further orders for posting him as Managing Director, Gulbarga Electricity Supply Company Ltd., Gulbarga vice Sri ganga Ram Baderiya, I.A.S. Transferred.

By Order and in the name of the Governor of Karnataka,

PR-519

**S. SELVAKUMAR**

Deputy Secretary to Government, DPAR (Services).

**ANIMAL HUSBANDRY AND FISHERIES SECRETARIAT**

**Sub :** Amendments to the Dairy Development Fund Rules, 2002-Orders-regarding.

**Read :**
1. GO. No. AHFF/117/KDC/93 dated: 16th March 2002
2. Letter No. DDF/TT/2002-03/90 dated: 19.02.2004 from the Chairman, Dairy Development Fund, Bangalore.

**Preamble:**

The Dairy Development Fund Rules, 2002 were issued as Annexure to Government Order No. AHFF/117/KDC/93, dated: 16th March 2002, read at (1) above. The Managing Committee of the Dairy Development Fund decided to apply to the Director of Income Tax (Exemption) fro registration of the Dairy Development Fund under Section 12A of the Income Tax Act. 1961 ("Act" for Short) for obtaining Income Tax exemption for the income earned by the Fund. The Director of Income Tax (Exemption) has suggested inclusion of the relevant Income Tax clauses in the Rules for the registration of the Dairy Development Fund under Section 12 A of the Act. The Chairman of the Dairy Development Fund in his letter dated 19.02.2004 read at (2) above, has requested Government to issue suitable amendments in this regard incorporating the relevant Income Tax Act clauses. The matter has been examined and it is considered to suitably amend "The Dairy Development Fund Rules 2002"

Hence the following Orders

**Order No.ಪಸಂಮೀ 8 ಕಹಾಮ 2004, Bangalore Dated: 6th May 2004**

After careful consideration of all aspects, Government are pleased to amend "The Dairy Development Fund Rules, 2002" as in the annexure to Government Order No. AHFF/117/KDC/93 dated: 16th March 2002, read at (1) above and the following sub-rule shall be added in rule (3) after sub-rule (b):

"C) This rule shall be irrevocable"

and, after Rule 5 (d) to the Rules under the sub-title "Functions of the Committee" the following shall be added:

e) The amount in the Fund shall be invested in the modes specified under the provisions of Section 13 (1) (d) read with Section 11 (5) of the Income tax Act, 1961, as amended from time to time;

f) No amendments to the Rules shall be made which may be repugnant to the provisions of Section 2 (15), 11, 12, 13 and 80 G of the Income Tax act, 1961 as amended from time to time Provided that no amendment to the rules shall be carried out without the prior approval of the Commissioner of Income Tax.

g) In the event of dissolution or winding up of the Dairy Development Fund, the assets remaining as on the date of dissolution shall under no circumstances, be distributed among the Management Committee, but the same shall be transferred to another charitable Institution or Fund whose objects are similar to those of this Fund and which enjoys recognition under Section 80 G of the Income Tax act. 1961, with the prior approval of the Government of Karnataka.

h) The benefits of the Fund shall be open to all, irrespective of caste, creed or religion,

i) The Fund and the income from the Fund shall be solely utilized for achieving of the objects of the Fund and no payments shall be made to the Management Committee by way of profit, interest, dividends etc.

j) Religious nature of activities shall not be carried out.

By Order and in the name of the Governor of Karnataka,

PR-522

**P. SAMPATHKUMAR**

Under Secretary to Government,
Animal Husbandry and Fisheries Department.